ಉಪನ್ಯಾಸ
ಗ್ರಂಥಮಾಲೆ

೧೦೯

# ಜನಪದ ಕಾವ್ಯದಲ್ಲಿ ಜೀವನ ಧರ್ಮ

ಪಿ. ವ್ಹಿ. ಮಲ್ಲಾಪುರ, ಎಂ. ಎ.




ಕರ್ನಾಟಕ ವಿಶ್ವವಿದ್ಯಾಲಯ ಧಾರವಾಡ

ನವಂಬರ, ೧೯೭೦

# ಜನಪದ ಕಾವ್ಯದಲ್ಲಿ ಜೀವನ ಧರ್ಮ



ಉಪನ್ಯಾಸ ಗ್ರಂಥಮಾಲೆ
೧೯

# ಜನಪದ ಕಾವ್ಯದಲ್ಲಿ ಜೀವನ ಧರ್ಮ

ಪಿ. ವ್ಹಿ. ಮಲ್ಲಾಪುರ, ಎಂ. ಎ.,




ಕರ್ನಾಟಕ ವಿಶ್ವವಿದ್ಯಾಲಯ
ಧಾರವಾಡ
೧೯೭೦

ಪ್ರಕಾಶಕರು :
ಎಸ್. ಎಸ್. ಒಡೆಯರ, ಎಂ. ಎ., ಎಲ್‌ಎಲ್. ಬಿ.,
ರಜಿಸ್ಟ್ರಾರ,
ಕರ್ನಾಟಕ ವಿಶ್ವವಿದ್ಯಾಲಯ, ಧಾರವಾಡ

ಪ್ರಥಮ ಮುದ್ರಣ : ೫,೦೦೦ ಪ್ರತಿಗಳು

ನವಂಬರ, ೧೯೭೦



ಬೆಲೆ : ೭೫ ಪೈಸೆ

ಮುದ್ರಕರು :
ಫ. ಶಿ. ಭಾಂಡಗೆ
ವಿದ್ಯಾವಾಹಿನಿ ವಿದ್ಯುನ್ಮುದ್ರಣ (ಪುಸ್ತಕ ವಿಭಾಗ)
ಗಂಗಾಪೂರಪೇಟ, ಗದಗ

# ಮುನ್ನುಡಿ

ನಮ್ಮ ವಿಶ್ವವಿದ್ಯಾಲಯದ ವ್ಯಾಸಂಗ ವಿಸ್ತರಣ ವಿಭಾಗವು ಗ್ರಾಮಾಂತರ ಪ್ರದೇಶಗಳಲ್ಲಿ ಪ್ರತಿ ತಿಂಗಳು ಏರ್ಪಡಿಸುತ್ತಿರುವ ಉಪನ್ಯಾಸ ಶಿಬಿರಗಳು ದಿನೇ ದಿನೇ ಜನಪ್ರಿಯುವಾಗುತ್ತ ಸಾಗಿರುವದು ನಿಜವಾಗಿಯೂ ಸಂತೋಷದ ಸಂಗತಿ. ಈ ಜ್ಞಾನ ಪ್ರಸಾರದ ಕಾರ್ಯದಲ್ಲಿ ಭಾಗವಹಿಸುವುದರಿಂದ ವಿಶ್ವ ವಿದ್ಯಾಲಯದ ಹಾಗೂ ಕಾಲೇಜುಗಳ ಅಧ್ಯಾಪಕರಿಗೆ ಆಯಾ ಪ್ರದೇಶದ ಜನತೆಯೊಡನೆ ಹೆಚ್ಚಿನ ಸಂಪರ್ಕವೊದಗುವದಲ್ಲದೆ ಎಂಥ ವಿಷಯುವನ್ನಾದರೂ ಕನ್ನಡದಲ್ಲಿ ತಿಳಿಸಿ ಹೇಳುವ ಹಾಗೂ ಅದನ್ನು ಸುಲಭವಾದ ಶೈಲಿಯಲ್ಲಿ ಬರವಣಿಗೆಯಲ್ಲಿಳಿಸುವ ಅವ ಕಾಶ ದೊರೆಯುತ್ತದೆ. ಈ ಕಾರ್ಯದಲ್ಲಿ ಅವರೆಲ್ಲರೂ ಮನ ಮುಟ್ಟಿ ಸಹಕರಿಸುತ್ತಿರುವುದು ಶ್ಲಾಘನೀಯ.

ಈ ಮಾಲೆಯಲ್ಲಿ ಈಗಾಗಲೇ ಬೇರೆ ಬೇರೆ ವಿಷಯು ಗಳನ್ನು ಕುರಿತು ೧೦೮ ಪುಸ್ತಕಗಳು ಪ್ರಕಟವಾಗಿವೆ. ಅಚ್ಚಾಗಿ ಹೊರಬಂದೊಡನೆ ಅವುಗಳ ಸಾವಿರಾರು ಪ್ರತಿಗಳನ್ನು ಜನರು ಕೊಂಡು ಓದುತ್ತಾರೆ. ಅನೇಕ ಪುಸ್ತಕಗಳು ಮೂರು ನಾಲ್ಕು ಮುದ್ರಣಗಳನ್ನು ಕಂಡಿರುವುದು ಈ ಮಾಲೆಯ ಉಪ ಯುಕ್ತತೆಯನ್ನೂ ಜನಪ್ರಿಯತೆಯನ್ನೂ ವ್ಯಕ್ತಗೊಳಿಸುತ್ತದೆ. ಇದು ನಾಡಿನ ಪ್ರಗತಿಯ ಚಿಹ್ನೆಯೆಂದು ಭಾವಿಸುತ್ತೇನೆ.

ವಿಶ್ವವಿದ್ಯಾಲಯ ಧನಸಹಾಯ ಆಯೋಗದವರು ಉಪನ್ಯಾಸ ಶಿಬಿರಗಳಿಗೂ, ಈ ಪುಸ್ತಿಕೆಗಳ ಪ್ರಕಟನೆಗೂ ನೆರವು ನೀಡುತ್ತಿದ್ದು, ಅವರಿಗೆ ವಿಶ್ವವಿದ್ಯಾಲಯವು ತನ್ನ ಕೃತಜ್ಞತೆಗಳನ್ನು ಸೂಚಿಸುತ್ತದೆ.

ವಿಶ್ವವಿದ್ಯಾಲಯದ ಈ ಸೇವೆಯ ಸಂಪೂರ್ಣ ಪ್ರಯೋಜನ ಪಡೆದು ಸಾಮಾನ್ಯ ಜನತೆ ನಾಡಿನ ಸರ್ವತೋಮುಖವಾದ ಪ್ರಗತಿಯಲ್ಲಿ ಪಾಲುಗೊಳ್ಳಲೆಂದು ಹಾರೈಸುತ್ತೇನೆ.

ಕರ್ನಾಟಕ ವಿಶ್ವವಿದ್ಯಾಲಯ
ಧಾರವಾಡ
೨—೧೧—೧೯೭೦

ಎ. ಎಸ್. ಅಡಕೆ
ಕುಲಪತಿ

# ನಿವೇದನೆ

ಕಲಬುರ್ಗಿ ಜಿಲ್ಲೆಯ ತಾಲೂಕಿನ ಸ್ಥಳವಾದ ಶಹಪುರದಲ್ಲಿ, ಕರ್ನಾಟಕ ವಿಶ್ವದಾಲಯದ 'ವ್ಯಾಸಂಗ ವಿಸ್ತರಣ ಮತ್ತು ಪ್ರಕಟನ ವಿಭಾಗ' ದವರು ಏರ್ಪಡಿಸಿದ್ದ ಉಪನ್ಯಾಸ ಶಿಬಿರದಲ್ಲಿ ಮಾತನಾಡುವ ಸದವಕಾಶ ನನಗೆ ದೊರಕಿತ್ತು. 'ಜನಪದ ಕಾವ್ಯದಲ್ಲಿ ಜೀವನ ಧರ್ಮ' ಎಂಬ ವಿಷಯದ ಮೇಲೆ ನಾನಂದು ಮಾಡಿದ ಭಾಷಣವೇ, ತುಸು ಹೊಂದಾಣಿಕೆಯೊಂದಿಗೆ ವಿಸ್ತಾರಗೊಂಡು, ಈಗ ಪುಸ್ತಿಕೆಯ ರೂಪದಲ್ಲಿ ಪ್ರಕಟಗೊಳ್ಳುತ್ತಿದೆ.

ಮಾನವ ಜೀವನದ ಮೇಲ್ಮೆಗೆ ಹಲವಾರು ಶಕ್ತಿಗಳು ಕಾರಣವಾಗಿವೆ. ಅವುಗಳಲ್ಲಿ ಸಾಹಿತ್ಯ ಶಕ್ತಿಯ ಪಾಲು ಬಹು ದೊಡ್ಡದು. ಸಾಹಿತ್ಯ ನಿರ್ಮಾಣ ಓದು, ಬರೆಹ ಬಲ್ಲ ಪ್ರತಿಭಾವಂತ ಸಾಹಿತಿಗಳಿಂದ ಆಗಿರುವಂತೆ, ಓದರಿಯದ ಹಳ್ಳಿಯ ಪ್ರತಿಭಾವಂತ ರಸಿಕರಿಂದಲೂ ಆಗಿದೆ. ಶಿಷ್ಟ ಸಾಹಿತ್ಯವನ್ನು ಪಡೆದ ಪ್ರತಿಯೊಂದು ದೇಶವೂ ಸಾಮಾನ್ಯವಾಗಿ ಇಂಥ ಜನಪದ ಸಾಹಿತ್ಯವನ್ನು ಸೃಷ್ಟಿಸಿದೆ. ಇಷ್ಟೇ ಅಲ್ಲ, ಜನಾಂಗ ಇರುವಲ್ಲೆಲ್ಲಾ ಜನವಾಣಿ ಬೇರಾಗಿ ನಿಂತು ಕವಿವಾಣಿಗೆ ಶಕ್ತಿ, ಸ್ಫೂರ್ತಿಗಳನ್ನು ತುಂಬಿದೆ. ನಿರ್ಮಾಣಗೊಂಡ ಅಂದಂದಿನ ಕಾಲದಲ್ಲಿ ಈ ಸಾಹಿತ್ಯ ಮುಟ್ಟದ ಜೀವನ ಕ್ಷೇತ್ರವಿಲ್ಲ. ಜನಪದವು

ಒಂದು ದೇಶದ ಅಥವಾ ನಾಡಿನ ಜನಸಂಖ್ಯೆಯಲ್ಲಿ ಬಹು ದೊಡ್ಡ ಪ್ರಮಾಣದ್ದು. ಕಾರಣ ಅವರಿಂದ ಸೃಷ್ಟಿಗೊಂಡ ಸಾಹಿತ್ಯ ದೇಶದ ನೈಜ ಸಾಂಸ್ಕೃತಿಕ, ಸಾಹಿತ್ಯಿಕ ಮೌಲ್ಯ ಗಳನ್ನು ಒಳಗೊಂಡಿರುತ್ತದೆ. ಈ ಸಾಹಿತ್ಯದಲ್ಲಿ ಒಂದು ಭಾಗ ವಾಗಿರುವ ಗೀತಗಳನ್ನು ತೆಗೆದುಕೊಂಡು ಅವುಗಳಲ್ಲಿ ಮೂಡಿ ರುವ ಜೀವನ ಧರ್ಮವನ್ನು ಓದುಗರಿಗೆ ಅಲ್ಪೋಪಹಾರವೆಂದು ಕೊಡುತ್ತಿರುವೆ. ಈ ಉದ್ದೇಶಕ್ಕಾಗಿ ನಾನು ಹತ್ತಾರು ಪುಸ್ತಕಗಳಿಂದ ಹಲವಾರು ಹಾಡುಗಳನ್ನು ಸಂಗ್ರಹಿಸಿ, ನನ್ನ ಸ್ಮರಣೆಯಲ್ಲಿದ್ದ ಕೆಲವನ್ನೂ ಅದಕ್ಕೆ ಸೇರಿಸಿದ್ದೇನೆ. ಪುಸ್ತಿಕೆಯ ಕೊನೆಯಲ್ಲಿ ಸಂಗ್ರಹಕಾರರನ್ನು ಕೃತಜ್ಞತೆಯಿಂದ ಸ್ಮರಿಸ ಲಾಗಿದೆ.

ನನ್ನೀ ಬರೆಹವನ್ನು ಅಚ್ಚಿಗೆ ಸಜ್ಜುಗೊಳಿಸಿ ಕೊಡುವಲ್ಲಿ ತುಂಬ ತಡ ಮಾಡಿದೆ. ವ್ಯಾಸಂಗ ವಿಸ್ತರಣ ಮತ್ತು ಪ್ರಕಟನ ಶಾಖೆಯ ನಿರ್ದೇಶಕರೂ, ಸಹೃದಯ ಕವಿಗಳೂ ಆದ ಶ್ರೀ ಕಣವಿಯವರು ನನ್ನ ವಿಲಂಬಕ್ಕೆ ಬೇಸರಿಸದೆ, ಗ್ರಂಥ ಪ್ರಕಾಶ ನಕ್ಕೆ ಅನುವು ಮಾಡಿಕೊಟ್ಟಿರುವರು. ಇದಲ್ಲದೆ ಸಹೋದರ ಪ್ರೊ. ಬಿ. ವ್ಹಿ. ಮಲ್ಲಾಪುರ ಅವರು ಸೂಕ್ತ ಸಲಹೆಗಳನ್ನಿತ್ತು ಸಹಕರಿಸಿರುವರು. ಇವರಿಗೆಲ್ಲ ನಾನು ತುಂಬ ಋಣಿ.

ಪಿ. ವ್ಹಿ. ಮಲ್ಲಾಪುರ, ಎಂ. ಎ

ಶ್ರೀ ಶ. ಬ. ವಾಣಿಜ್ಯ
ಮಹಾವಿದ್ಯಾಲಯ
ಕಲಬುರ್ಗಿ
೧೪–೯–೧೯೭೦.

# ಪರಿವಿಡಿ

# ಜನಪದ ಕಾವ್ಯದಲ್ಲಿ ಜೀವನ ಧರ್ಮ

## ೧. ಮೊದಲ ಮಾತು

ಆದಿ ಮಾನವನು ನಿಸರ್ಗದ ಮಡಿಲಲ್ಲಿ ನಿಂತುಕೊಂಡಾಗ ಅದರ ನಾನಾ ಬಗೆಯ ರೂಪಗಳು ಅವನ ಹೃದಯಾಂತರಾಳದಲ್ಲಿ ಭಾವನೆಗಳ ತರಂಗಗಳನ್ನು ಹುಟ್ಟಿಸಿದವು. ಜುಳು ಜುಳು ಹರಿಯುವ ನೀರು, ಭೂದೇವಿಗೆ ಹಸಿರು ಮಡಿ ಉಡಿಸಿದ ಹಾಗೆ ಹರಡಿದ್ದ ಹುಲ್ಲು, ಹೂ-ಮೊಗ್ಗೆಗಳ ಚೆಲುವಿನಿಂದ ಬಳಕುತ್ತಿರುವ ಬಳ್ಳಿಗಳು. ತರುಮರಾದಿಗಳ ಹಸಿರಿನ ಮರೆಯಲ್ಲಿ ಸ್ವರವೆತ್ತಿ ಕೂಗುತ್ತಿರುವ ಕೋಗಿಲೆ, ಸುಗಂಧಪೂರಿತ ಮಂದಮಾರುತ ಇವೆಲ್ಲ ಅವನ ಅಂತರಂಗದಲ್ಲಿ ಇನ್ನೂ ಆನಂದದ ಅನುಭವ ಉಕ್ಕೇರುವಂತೆ ಮಾಡಿರಬೇಕು. ಗಿಡ-ಬಳ್ಳಿಗಳು ಹೀಗೆ ಚಿಗಿತು ನಿಸರ್ಗದ ನಗೆಯ ಭಾವವನ್ನು ಬಿತ್ತರಿಸಲೆಂಬಂತೆ ಮೊಗ್ಗುಗಳು ದಳ ಬಿಚ್ಚಿ ಅರಳಿದಾಗ ಮನುಷ್ಯನೂ ಈ ಸುಖವನ್ನನುಭವಿಸಿ ಗುನುಗುನು ಹಾಡಿಕೊಳ್ಳಲು ಪ್ರಾರಂಭಿಸಿರಬೇಕು. ಆನಂದವನ್ನು ಮಾತಿನ ಮೂಲಕ ಹೊರಗೆ ಹಾಕುವ ಸಾಧ್ಯತೆ ಇಲ್ಲದಿರುವಾಗ ಅವನು ಧ್ವನಿ, ನಾದಗಳನ್ನೇ ಬಳಸಿಕೊಂಡಿರುವುದು ಸಾಧ್ಯವಿದೆ. ಅವನಿಗೆ ಮಾತು ಬಂದಾಗ ಅಂತರಂಗದ ಆನಂದ

ಲಹರಿ ಶಬ್ದರೂಪದ ಗೀತವಾಗಿ ಹೊರಹೊಮ್ಮಿತು. ಎನ್ನಲಡ್ಡಿ ಯಿಲ್ಲ. C M. Bowra ಎಂಬ ವಿದ್ವಾಂಸನ "Song begins with some sort of tune and to adopt real words to it is a seperate and subsequent task..." ಎನ್ನುವ ಮಾತು ಇದಕ್ಕೆ ಪುಷ್ಟಿಯನ್ನು ಕೊಡುತ್ತದೆ. ಅನುಭವ ಗೀತವಾಗಿ ಮೂಡುವ ದಕ್ಕಿಂತ ಪೂರ್ವದಲ್ಲಿ ನಾದ, ಧ್ವನಿಗಳಲ್ಲಿ ಮಿಡಿದುದೇ ಜನಪದ ಹಾಡಿನ ಮೂಲವೆಂದು ಹೇಳಬಹುದು. ಮಾನವನ ಬಾಳು ವಿಸ್ತಾರವಾದಂತೆ, ಅವನ ಜೀವನಾನುಭವ ಹೆಚ್ಚಿದಂತೆ, ರಸಿಕತೆ ಉಕ್ಕಿದಂತೆ, ಜನಪದ ಸಾಹಿತ್ಯವೂ ವಿಸ್ತಾರ, ವೈವಿಧ್ಯಗಳನ್ನು ತಾಳುತ್ತ ಮುಂದುವರಿಯಿತು ಮಂಗ ಮಾನವನಾದಾಗಲೇ ಜಾನಪದ ಸಂಪ್ರದಾಯ ಮೊಳೆಯಿತು. ಅವನ ಬುದ್ಧಿ-ಮನಸ್ಸು ಗಳು ವಿಕಾಸವಾದಂತೆಲ್ಲ ಜಾನಪದ ಕಲೆಗಳು ಹೊರಹೊಮ್ಮಿ ದವು. ಅವನ ನಾಲಿಗೆಯ ಮೇಲೆ ಮಾತು ಕುಣಿದಾಗಲೇ ಜಾನ ಪದ ಸಾಹಿತ್ಯ ಉದ್ಭವವಾಯಿತು.*

ಕಾಲಾಂತರದಲ್ಲಿ ವಿಸ್ತಾರವಾಗಿ ಬೆಳೆದು ಶ್ರೀಮಂತವಾಗಿ ರುವ "ಜಾನಪದ ಜ್ಞಾನಭಂಡಾರ' (Folk lore) ಕನ್ನಡ ದಲ್ಲಿ ಗಣನೀಯ ಪ್ರಮಾಣದಲ್ಲಿದೆ. ಜಾನಪದ ಎಂದರೆ ಜನಪದ (Folk)ಕ್ಕೆ ಸಂಬಂಧಪಟ್ಟದ್ದು ಎಂದರ್ಥ. ನಮ್ಮ ನಾಡಿನಲ್ಲಿ

* ಪ್ರೊ. ದೇಜಗೌ— 'ಜನಪದ ಸಾಹಿತ್ಯ ಸಮೀಕ್ಷೆ' (ಮುನ್ನುಡಿ)

ಜನಪದದ ಕೊಡುಗೆಯಾಗಿ ಬಂದಿರುವ ಜನಪದ ಸಂಗೀತವಿದೆ; ಜನಪದ ನೃತ್ಯವಿದೆ; ಜನಪದ ನಾಟ್ಯವಿದೆ; ಜನಪದ ವೈದ್ಯವಿದೆ; ಜನಪದ ಉಡುಗೆ-ತೊಡುಗೆಗಳೂ ಉಂಟು. ಹೀಗೆ ವೈವಿಧ್ಯಮಯವಾಗಿ, ಜನಪದದಿಂದ ಉಗಮಗೊಂಡು ಬಂದ ಸಂಪ್ರದಾಯ ವಿದ್ಯೆ, ಜ್ಞಾನಗಳ ಒಟ್ಟನ್ನು ಜಾನಪದ ವಿಜ್ಞಾನ (Folk lore) ಎಂದು ಕರೆಯಬಹುದು. ಜನಪದ ಸಾಹಿತ್ಯ (Folk literature) ಇದರಲ್ಲಿಯ ಒಂದು ಅಂಗ ಮಾತ್ರ. ಜನಪದ ಕಾವ್ಯ ಈ ಸಾಹಿತ್ಯದಲ್ಲಿಯ ಒಂದು ಭಾಗ. ಆದರೆ ಜಾನಪದದ ಸಾರಸರ್ವಸ್ವವೆಂದರೆ ಜನಪದ ಸಾಹಿತ್ಯ ಎನ್ನುವಷ್ಟರ ಮಟ್ಟಿಗೆ ಇದರ ಜನಪ್ರಿಯತೆ, ಮಹತ್ತು, ಬೃಹತ್ತು ಈಗ ಬೆಳೆದು ನಿಂತಿದೆ. ಇನ್ನುಳಿದ ಭಾಗಗಳ ಸಕ್ರಮವೂ ಸಮಗ್ರವೂ ಆದ ಅಭ್ಯಾಸಕ್ರಮವು ಬೆಳೆದು ಬಂದಾಗ ಅವೂ ಜಾನಪದ ಪರಂಪರೆಯನ್ನು ಅರಿಯುವಲ್ಲಿ, ಅದರ ಬಾಳಿನ ರೀತಿ ನೀತಿಗಳನ್ನು ತಿಳಿಯುವಲ್ಲಿ ಮಹತ್ವದ ಮೈಲುಗಲ್ಲುಗಳಾಗಿ ಪರಿಣಮಿಸಬಲ್ಲವು.

ನಗರ, ಪಟ್ಟಣಗಳ ನಾಗರಿಕ ಜೀವನದಿಂದ ಬಹು ದೂರವಾದ ಹಳ್ಳಿಗಳಲ್ಲಿ ಮಣ್ಣುಮಕ್ಕಳಾಗಿದ್ದುಕೊಂಡು, ದುಡಿಮೆಯನ್ನೇ ಜೀವನಮಂತ್ರವಾಗಿಟ್ಟುಕೊಂಡು, ದುಡಿದುಡಿಯುತ್ತಲೆ ಜೀವನದ ವಿವಿಧಾನುಭವಗಳಿಗೆ ಹಾಡಿನ ರೂಪದ ಅಭಿವ್ಯಕ್ತಿಯನ್ನು ಕೊಟ್ಟಂಥ ರಸಿಕರು ನಮ್ಮವರು. ಜೀವನವನ್ನವರು ತೀರ ಆತ್ಮೀಯತೆಯಿಂದ ಕಂಡವರು; ದುಡಿಮೆಯೊಡನೆ

ಸಾಮರಸ್ಯ ಹೊಂದಿ ಬಾಳಿದವರು. ಆದುದರಿಂದಲೇ ಅವರು ಹಾಡಿ
ರುವ ಗೀತಗಳಲ್ಲೆಲ್ಲ ಒಂದು ಬಗೆಯ ಅಪ್ಪಟ ಮಣ್ಣಿನವಾಸನೆ,
ಸಹಜ ಚೆಲುವು ಹೊರಹೊಮ್ಮುತ್ತಿರುತ್ತವೆ. ಪದ್ಯಗಳಲ್ಲಿ
ಮಾತಿನ ಸೊಗಸು, ಸಾರಳ್ಯ, ಮೊನಚು, ಸಂಕ್ಷಿಪ್ತತೆ ತಟ್ಟನೆ
ಮನ ಹಿಡಿಯುತ್ತವೆ. ಜನಪದವು ಯಾವಾಗಲೂ ನಾಡಿನ
ಶುಪ್ಧಾಂಗ. ಅವರು ಜೀವನದಲ್ಲಿ ಕಂಡದ್ದು, ಉಂಡದ್ದು, ನಡೆ
ದದ್ದು, ನುಡಿದದ್ದು, ದುಡಿದುದು. ಹಾಡಿದುದು ಒಂದು ನಾಡಿನ,
ರಾಷ್ಟ್ರದ ನೈಜ ಸಂಸ್ಕೃತಿಯನ್ನಳೆಯುವ ಅಳತೆಗೋಲು.

Knowledge of a nation`s folklore is
the knowledge of the creative working
of the mind of its folk. It is a key to
open the gate of the nation's value, a
high way that leads to the heart of it's
people'*

ಜಾನಪದೀಯ ಪರಂಪರೆ ಇಷ್ಟು ಮಹತ್ವಪೂರ್ಣವಾ
ದ್ದರೂ ಪ್ರಪಂಚದ ನಾಗರಿಕ ಜನಾಂಗವೆಲ್ಲ ಇದನ್ನು ಅಷ್ಟಾಗಿ
ಗಮನಿಸದೇ ಬಂದುದು ನಮಗೆ ಕಂಡುಬರುತ್ತದೆ. ಇದು ...
ರಿಯದ ಬೆಳ್ಳಕ್ಕಿಗಳಿಂದ ನಿರ್ಮಾಣವಾದದ್ದು. ಶಿಷ್ಟರಿಂ
ರೂಪುಗೊಂಡುದಲ್ಲ, ಪಂಡಿತ ಮಾನ್ಯವಾದುದೂ ಅಲ್ಲ ಎಂಬುದೆ
ಇದರ ಅಸಡ್ಡೆಗೆ ಕಾರಣವಾಗಿರಬಹುದು. ಜನಪದ ಗೀತಗಳನ

* ಚಿತ್ತರಂಜನ ಚಟರ್ಜಿ —Folk lore researc
in Indi

ಹಾಡಿದವರು ಅನಕ್ಷರಸ್ಥರು; ಅವರು ಕುರಿತೋದಿದವರಲ್ಲ. ಕಾವ್ಯ ರಚಿಸಬೇಕೆಂದವರೂ ಅಲ್ಲ. ಕಾವ್ಯದ ಅಭ್ಯಾಸಕ್ಕೆಂದು ಪಂಡಿತರ ಮಂದಿರಕ್ಕೆ ಕಾಲಿಟ್ಟವರೂ ಅಲ್ಲ. ಜೀವನರಂಗವೇ ಅವರಿಗೆ ಅನುಭವ ರಂಗ; ನಿಸರ್ಗದತ್ತವಾಗಿ ಬಂದಿದ್ದ ಪ್ರತಿಭೆ. ರಸಿಕತೆಗಳೆ ಗೀತೆಗಳನ್ನು ಹೊರ ಹೊರಡಿಸಿದ ಶಕ್ತಿಗಳು. ಬರೆಹ ಇಲ್ಲದ ಬಾಯಿ ಮಾತಿನ ರೂಪದವಿವು. ಆದರೂ ಜನಪದ ಕಾವ್ಯದಲ್ಲಿ ಛಂದವಿದೆ, ಕವಿತೆಯ ಸಹಜ ಸುಂದರ ಗತಿ ಇದೆ. ಕಿರಿಯದರಲ್ಲಿಯೆ ಸ್ಪಷ್ಟ ಹಾಗೂ ನಿರ್ದಿಷ್ಟವಾದ ಅರ್ಥವನ್ನು ನಿಡಿಸುಬಲ್ಲ ಹಿಡಿತವಿದೆ. ಆದುದರಿಂದಲೇ ಇಂಥ ಕಾವ್ಯನಿರ್ಮಾಪಕರನ್ನು ಕುರಿತು ಕವಿರಾಜಮಾರ್ಗಕಾರನು 'ಕುರಿತೋದದೆಯುಂ ಕಾವ್ಯ ಪ್ರಯೋಗ ಪರಿಣತಮತಿಗಳ್' ಎಂದು ಹೊಗಳಿರುವನು. ಆದರೆ ಮಧುರನಂತಹ ಪಾಂಡಿತ್ಯಪ್ರಿಯ ಕವಿ ಜನಪದ ಕಾವ್ಯವನ್ನು ಪರ್ಯಾಯವಾಗಿ—

ಪಂಡಿತರುಂ ವಿವಿಧ ಕಳಾ
ಮಂಡಿತರುಂ ಕೇಳತಕ್ಕ ಕೃತಿಯಂ ಕ್ಷಿತಿಯೊಳ್
ಕಂಡರ್ ಕೇಳ್ವೊಡೆ ಗೊರವರ
ದುಂಡುಚಿಯೆ ಬೀದಿವರಿಯೆ ಜೀರನ ಕತೆಯೆ

ಎಂದು ಹೀಯಾಳಿಸಿದ್ದರೆ, ನೇಮಿಚಂದ್ರನು ಜನಪದ ಕವಿಗಳನ್ನು 'ಪದವಿಡಲರಿಯದ ನಾಲಗೆ ಹೆಳವರೆಂದು, ಬಗೆಗುರುಡರೆಂದು, ಓದುಗೇಳದ ಅಕ್ಕರಗಿವುಡರೆ'ಂದು ತುಚ್ಛೀಕರಿಸಿ 'ಅವರು ಕಬ್ಬಿಗರಕ್ಕುಮೆ ?' ಎಂದು ಪ್ರಶ್ನಿಸಿರುವನು ಈ ಸಿಂಪಿಗೆ ಮುಂದಲಿ

ಕೆಯ ಪ್ರತ್ಯುತ್ತರ ಕೊಡಲು ಜನಪದ ಕವಿ ಹೊರಟಂತಿಲ್ಲ ಅವರಿಗೆ ವಾದ-ವಿವಾದದ ತೊಡಕೂ ಬೇಕಾಗಿರಲಿಲ್ಲ. ಯಾರು ಹೇಗೇ ತೆಗಳಲಿ, ಯಾರು ಹೇಗೇ ಅಸಡ್ಡೆ ತೋರಲಿ ಹೆಸರ ಬಯಸದ, ತಮ್ಮ ಗೀತೆಯ ಹಿರಿಮೆಯನ್ನು ತಾವೇ ಅರಿಯದ ಈ 'ಅಜ್ಞಾತ ಕವಿಗಳ ಅಮರಗೀತ' ಗಳು ಬರೆಹವಿಲ್ಲದೆ ಪ್ರತಿಭೆಯ ಗುರುಬಲದಿಂದ ಬಾಳಿದವು; ಸಹಜ ಸತ್ವದ ಶಕ್ತಿವಿಶೇಷದಿಂದ ಇಂದಿನ ವರೆಗೂ ಪ್ರವಹಿಸುತ್ತ ಬಂದವು. ಜನಪದ ಸಾಹಿತ್ಯ ಜನರನ್ನು ಸಾಕ್ಷರರನ್ನಾಗಿ ಮಾಡಿರಲಿಕ್ಕಿಲ್ಲ. ಆದರೆ ಜನತೆಗೆ ಸುಸಂಸ್ಕೃತಿಯ ದೀಕ್ಷೆಕೊಡಲು ಮಾತ್ರ ಅನವರತ ಹೆಣಗಾಡಿದೆ.

ಪಾಶ್ಚಿಮಾತ್ಯ ದೇಶಗಳಲ್ಲಿಯೂ ಜನಪದ ಸಾಹಿತ್ಯದ ಬಗ್ಗೆ ಜಿಜ್ಞಾಸೆ ಕುದುರಿದುದು ಹೋದ ಶತಮಾನದಲ್ಲಿಯೆ. ಜಾನ್ ತಾಮ್ಸ ಎಂಬಾತನು ೧೮೪೬ರಲ್ಲಿ ಮೊದಲ ಬಾರಿಗೆ Folk lore ಎನ್ನುವ ಪದವನ್ನು ಪ್ರಯೋಗಿಸಿದನು. ಗ್ರಿಮ್ ಸಹೋದರರು (ಕ್ರಿ. ಶ ೧೮೧೨) ಹೊರತಂದ ಕಥಾ ಸಂಕಲನಗಳು ಅನೇಕರ ಕಣ್ಣು ತೆರೆಯಿಸಿ ಜನಪದ ಸಾಹಿತ್ಯವನ್ನು, ಜಾನಪದ ಸಂಪ್ರದಾಯವನ್ನು ವೈಜ್ಞಾನಿಕವಾಗಿ, ಕ್ರಮಬದ್ಧವಾಗಿ ಅರ್ಥೈಸಲು ಮಾರ್ಗ ಮಾಡಿಕೊಟ್ಟವು. ಅಲ್ಲಿಂದೀಚೆಗೆ ರಶಿಯಾ, ಅಮೇರಿಕ, ಇಂಗ್ಲಂಡ, ಜರ್ಮನಿ, ಚೀನ ಮೊದಲಾದ ದೇಶಗಳಲ್ಲಿ ಜಾನಪದ ಅಭ್ಯಾಸ ಶಾಸ್ತ್ರೀಯ ರೀತಿಯಲ್ಲಿ ಕೂಲಂಕಷವಾಗಿ ಅಭಿವೃದ್ಧಿ ಪಡೆಯುತ್ತಿದೆ. ವಿಶ್ವವಿದ್ಯಾಲಯಗಳ ಮಟ್ಟದಲ್ಲಿ ಈ ಸಾಹಿತ್ಯ ಅಭ್ಯಸಿಸಲ್ಪಡುತ್ತಿದೆ.

ಭಾರತದಲ್ಲಿಯೂ ಜಾನಪದ ಪ್ರಜ್ಞೆ, ಇನ್ನುಳಿದ ಸಾಹಿತ್ಯಗಳ ವಿಷಯದಲ್ಲಿ ಬಂದಂತೆ, ಪಾಶ್ಚಿಮಾತ್ಯರ ಪ್ರಭಾವ, ಪ್ರಚೋದನೆಗಳಿಂದಲೇ ಬಂದಿತೆಂದು ಹೇಳಿದರೆ ತಪ್ಪಾಗದು. ಪರಕೀಯ ಸಂಸ್ಕೃತಿಯ ಪ್ರಭಾವದಲ್ಲಿ ನಮ್ಮದನ್ನೇ ನಾವು ಮರೆತಂಥ ಕರಕಷ್ಟ ಸ್ಥಿತಿ ನಮಗೊದಗಿತ್ತು. ಆದರೆ ಜಾನಪದ ಕ್ಷೇತ್ರದಲ್ಲಿ ಕೆಲಸ ಪ್ರಾರಂಭವಾಯಿತು. ಪ್ರೊ. ದೇವೇಂದ್ರನಾಥ ಸತ್ಯಾರ್ಥಿಯವರು ಕೆಚ್ಚೆದೆಯಿಂದ ಈ ದಾರಿಯಲ್ಲಿ ಸಾಗಿ ಮೊದಲ ಮಣೆಯ ಗೌರವಕ್ಕೆ ಪಾತ್ರರಾಗುವಷ್ಟು ಕೆಲಸ ಮಾಡಿದ್ದಾರೆ. * ಶ್ರೀ ಬಿ. ಕೆ. ಸರಕಾರ, ಜೆ. ಬರುವಾ ಮೊದಲಾದ ಮಹನೀಯರು ಈ ನಿಟ್ಟಿನಲ್ಲಿ ಪ್ರಶಂಸನೀಯ ಸೇವೆ ಸಲ್ಲಿಸಿರುವರು.

ಕನ್ನಡದಲ್ಲಿ ಜಾನಪದೀಯ ವ್ಯಾಸಂಗ ಇತ್ತೀಚೆಗೆ ಪ್ರಾರಂಭವಾಯಿತು. "Folk literature" ಎನ್ನುವ ಪದಕ್ಕೆ ನಮ್ಮಲ್ಲಿ ಜನಪದ ಸಾಹಿತ್ಯವೆಂಬ ಪ್ರಯೋಗವನ್ನು ಮೊತ್ತಮೊದಲು ಯಾರು ಬಳಸಿದರೊ ವಿಚಾರ ಮಾಡಬೇಕಾದ ಕುತೂಹಲದ ಸಂಗತಿ. ನನಗೆ ತಿಳಿದಂತೆ, ೧೯೩೧ ರಲ್ಲಿ ಪ್ರಕಟವಾದ 'ಗರತಿಯ ಹಾಡುಗಳು' ಸಂಕಲನಕ್ಕೆ ಮೊದಲ ಮಾತುಗಳನ್ನು ಬರೆದ ದಿ. ಬಿ. ಎಂ. ಶ್ರೀಯವರೂ, ಶ್ರೀ ದ. ರಾ. ಬೇಂದ್ರೆಯವರೂ ಈ ಮಾತನ್ನು ಬಳಸಿದ್ದಾರೆ. ಅದಕ್ಕೂ ಮುಂಚಿನ ಉಲ್ಲೇಖಗಳು 'ಹಳ್ಳಿಯ ಹಾಡು' ಗಳೆಂದು ದೊರೆ

---

* The Folklore Element in Indian culture

ಯುತ್ತವೆ" ಎಂದು ಪ್ರೊ. ಹಾ. ಮಾ. ನಾಯಕರು ಅಭಿಪ್ರಾಯ ಪಟ್ಟಿದ್ದಾರೆ. ೧೯೩೩ರ ವರೆಗಿನ ಅವಧಿಯಲ್ಲಿ ಮತ್ತೆರಡು ಕೃತಿಗಳು 'ಜೀವನ ಸಂಗೀತ' ಮತ್ತು 'ಮಲ್ಲಿಗೆ ದಂಡೆ' ಪ್ರಕಟಗೊಂಡು ಜನಪದ ಸಾಹಿತ್ಯದ ರುಚಿಯನ್ನು ನಾಡಿನ ಜನರಿಗೆ ಹಚ್ಚಿದವು. ದಿ. ಮಧುರಚೆನ್ನ, ದಿ. ಕಾಪಸೆ ರೇವಪ್ಪ, ಶ್ರೀ ಸಿಂಪಿ ಲಿಂಗಣ್ಣ ಮೊದಲಾದವರನ್ನೊಳಗೊಂಡ ಹಲಸಂಗಿಯ 'ಗೆಳೆಯರ ಗುಂಪು' ಉತ್ತರ ಕರ್ನಾಟಕದಲ್ಲಿ ಜನಪದ ಸಾಹಿತ್ಯವನ್ನು ಕುರಿತು ಹಿರಿಯ ಮಟ್ಟದ ಕೆಲಸವನ್ನು ಮಾಡಿದೆ. ಡಾ. ಗದ್ದಗಿಮಠ, ದೇವುಡು, ಗೊರೂರು ರಾಮಸ್ವಾಮಿ ಅಯ್ಯಂಗಾರ್, ಕ. ರಾ. ಕೃಷ್ಣಸ್ವಾಮಿ, ಜೀಶಂಪ, ಬೆಟಗೇರಿ ಕೃಷ್ಣಶರ್ಮ, ಮಾಸ್ತಿ, ಶಿವರಾಮ ಕಾರಂತ ಮೊದಲಾದ ಮಹನೀಯರು ಜಾನಪದ ಸಂಪ್ರದಾಯವನ್ನು ಕುರಿತು ಹಲವಾರು ಗ್ರಂಥಗಳನ್ನು, ಲೇಖನಗಳನ್ನು ಪ್ರಕಟಿಸಿ ಅದರ ವಿಸ್ತಾರ, ವೈವಿಧ್ಯ, ಘನತೆಗಳ ಪರಿಚಯವನ್ನು ಮಾಡಿಕೊಟ್ಟಿದ್ದಾರೆ. ಅದರಲ್ಲಿಯೂ ಜನಪದ ಸಾಹಿತ್ಯ ಭಾಗದ ಕೆಲಸ ತ್ವರಿತ ಗತಿಯಲ್ಲಿ ಸಾಗಿ ಒಂದು ಬಗೆಯ ಸುಸಂಬದ್ಧ ಸ್ವರೂಪ ಇದಕ್ಕೆ ಬಂದಿದೆ ಎಂದು ಹೇಳಬಹುದು.

ಜನಪದ ಗೀತಗಳನ್ನು ಕಾವ್ಯವೆಂದು ಕರೆಯಬೇಕೆಂಬುದರ ಬಗ್ಗೆ ಈಗ ಭಿನ್ನಾಭಿಪ್ರಾಯಗಳಿಲ್ಲವೆಂದೇ ಹೇಳಬಹುದು. 'ವಾಕ್ಯಂ ರಸಾತ್ಮಕಂ ಕಾವ್ಯಂ' ಎಂಬ ವಿಶ್ವನಾಥನ ಕಾವ್ಯ ಲಕ್ಷಣದ ಮಾನದಂಡವನ್ನೇ ತೆಗೆದುಕೊಳ್ಳಲಿ; 'ರಮಣೀಯಾರ್ಥ ಪ್ರತಿಪಾದಕಶ್ಶಬ್ದಃ ಕಾವ್ಯಂ' ಎಂದು ಹೇಳಿದ ಜಗನ್ನಾಥ

ಪಂಡಿತನ ಕಾವ್ಯಸೂತ್ರದ ಒರೆಗಲ್ಲಿಗೇ ಹಚ್ಚಿ ತಿಕ್ಕಲಿ, 'ರಸಜೀವ ಭಾವ ಒಡಲಾ'ಗಿ ಮೂಡಿ ಬಂದಿರುವ ಜನಪದ ನುಡಿ ಕಾವ್ಯದ ಗಾರುಡಿಯಾಗಿರುವುದನ್ನು ನಾವು ಸಹಜವಾಗಿ ಕಾಣುತ್ತೇವೆ.

**ಅಳುವ ಕಂದನ ತುಟಿಯು ಹವಳದ ಕುಡಿಹಾಂಗ।**
**ಕುಡಿಹುಬ್ಬು ಬೇವಿನೆಸಳ್ಹಾಂಗ। ಕಣ್ನೋಟ**
**ಶಿವನ ಕೈಯಲಗು ಹೊಳೆದ್ಹಾಂಗ॥**

ಈ ನುಡಿಯಲ್ಲಿ ಉಪಮೆಯ ಸೊಗಸು, ಸೌಂದರ್ಯ ದರ್ಶನದ ಹಿರಿಮೆ, ಕಲ್ಪನೆಯ ಸಹಜತೆ, ಒಟ್ಟಂದದ ಭಾವ ಅನಾಯಾಸ ವಾಗಿ ಮೂಡಿ ಮಿಂಚುತ್ತಿರುವದನ್ನು ಕಾಣಬಹುದು.

**ಹೂವಿನ್ಯಾಗ ಹುದುಗ್ಯಾನ ಮಾಲ್ಯಾಗ ಮಲಗ್ಯಾನ।**
**ಮೊಗ್ಗಾಗ ಕಣ್ಣ ತೆರದಾನ। ಲಿಂಗಯ್ಯನ**
**ನೋಡಟಗೆ ನಿದ್ದಿ ಬಯಲಾಗಿ॥**

ಇಲ್ಲಿ ಹೂ, ಮಾಲೆ, ಮೊಗ್ಗು ಮೊದಲಾದ ವ್ಯಕ್ತ ಸುಂದರ ವಸ್ತುಗಳಲ್ಲಿ ಅವ್ಯಕ್ತ ಸ್ವರೂಪನಾದ ಲಿಂಗಯ್ಯನ ಚೆಲುವನ್ನು ಕಂಡ ಕಣ್ಣುಗಳು ಪಂಚೇಂದ್ರಿಯ ಸುಖದಿಂದ ದೂರವಾದ ಪರಮಾನಂದಾನುಭವವನ್ನು ಹೃದಯದಲ್ಲಿ ದೀಪ್ತಗೊಳಿಸು ತ್ತವೆ. ಪರಮಾನಂದವೇ ಪರಬ್ರಹ್ಮನ ದರ್ಶನ ಮಾಡಿಸುವದ ರಿಂದ ಅಲ್ಲಿ ಲೋಕ ನಿದ್ರೆ, ಭೌತಿಕ ಜಾಡ್ಯ ಮಾಯವಾಗಿ ಅನು ಭವದ ಎಚ್ಚರ, ಅರಿವಿನ ಬೆಳಗು ತೆರೆಯುವುದು. ಇಂಥ

ಸುಂದರ ಕಲ್ಪನಾ ವಿಲಾಸ ಮೂರು ಚಿಕ್ಕ ಸಾಲುಗಳಲ್ಲಿ ಮಡು
ಗಟ್ಟಿ ನಿಂತಿದೆ

ಹೀಗೆಯೇ ಜನಪದ ಕಾವ್ಯ ಪ್ರಿಯ-ಅಪ್ರಿಯ, ಲೌಕಿಕ
ಅಲೌಕಿಕ ಮುಂತಾದ ಯಾವುದೇ ದೃಶ್ಯದಲ್ಲಿ ನಮ್ಮನ್ನು ಒಂದ
ಬಗೆಯ ನಿಸ್ಸಂಗ ಪರಿಭಾವನೆಯಲ್ಲಿ ನಿಲ್ಲಿಸಿ ಈ ಎಲ್ಲ ಸ್ಥಿ
ಗಳಿಗಿಂತ ಭಿನ್ನವೂ ಲೋಕಾತೀತವೂ ಆದ ಸೌಂದರ್ಯಾನುಭ
ಸುಖದಲ್ಲಿ ಮೀಯಿಸುತ್ತದೆ. ಆದುದರಿಂದಲೇ ಜನಪದ ಹಾಡು
ಗಳನ್ನು ಸಾಹಿತ್ಯವೆಂದು ಪರಿಗಣಿಸದೆ ಗತಿಯಿಲ್ಲ. ಕಾಂತೆಯ
ಮಾತೇ ಕಾವ್ಯ ಮಾತೆಯಾಗಿರುವಾಗ ತ್ರಿಪದಿಯೆ ಗಾಯತ್ರಿ
ಯಾಗಿರುವಾಗ, ದೇವ ನಿಃಶ್ವಸಿತ ವೇದಗಳಂತೆ ಸ್ತ್ರೀ ಹೃದಯ
ನಿಃಶ್ವಸಿತವೇ ಕಾವ್ಯವಾಗಿರುವಾಗ, ಪ್ರಾಸಾದಿಕತೆಯೆ ಪ್ರಾಸ
ನುಪ್ರಾಸವಾಗಿರುವಾಗ, ಕಟ್ಟುಳ್ಳ ವೈ - ಹುಟ್ಟು ಸವಿಯುಳ್ಳ
ನುಡಿ ತಿಳಿಯಾದ ಬಗೆ ತಳೆದಿರುವಾಗ ಹೆಣ್ಣುಮಕ್ಕಳ ಹಾಡು
ಗಳಲ್ಲಿ ಸಾಹಿತ್ಯ ಲಕ್ಷಣವನ್ನು ಕೇಳಬಹುದೆ ? ಹೃದಯ
ನೂರು ಭಾವನೆಗಳನ್ನೆಲ್ಲ ಕನ್ನಡಿಸಿ ಮನವನ್ನು ನೇರವಾ
ಅರ್ಥಕ್ಕೊಯ್ದು ದಿನಗಳೆದಂತೆ ನಿತ್ಯ ನೂತನವಾಗಿ, ಹಳಸಿ
ಜೀವನಕ್ಕೆ ಒಸಗೆಯಾಗಿ, ಹೊಸ ಸಾಹಿತ್ಯಕ್ಕೆ ಸಂಜೀವನದಂ
ರುವ ಈ ಹಾಡುಗಳಲ್ಲಿ ಸಾಹಿತ್ಯದ ಸರ್ವ ಲಕ್ಷಣಗಳ
ತುಂಬಿವೆ".*

---

* ಸಿಂಪಿ ಲಿಂಗಣ್ಣ—'ಜನಾಂಗದ ಜೀವಾಳ'

ಜನಪದ ಕಾವ್ಯವೆಂದು ಹೆಸರಿಸುವ ಈ ವಿಭಾಗದಲ್ಲಿ ಗರತಿಯ ಹಾಡುಗಳು, ದೇವಸ್ತುತಿಯ ಗೀತೆಗಳು, ಲಾವಣಿ-ಕೋಲಾಟ-ಹಂತಿಯ ಪದಗಳು, ಹಬ್ಬ-ಹುಣ್ಣಿಮೆ-ಹೋಳಿಯ ಹಾಡುಗಳು, ದುಂದುಮೆ. ಡೊಳ್ಳಿನ ಪದಗಳು ಹೀಗೆ ಇನ್ನೂ ಹಲವಾರು ಬಗೆಯ ಬಿಡಿ ಹಾಗೂ ಇಡಿಯಾದ ಪದಗಳು ಸಮಾವೇಶಗೊಳ್ಳುವವು. ಈ ಕಿರು ಹೊತ್ತಗೆಯ ವಿಸ್ತಾರವನ್ನು ಗಮನದಲ್ಲಿಟ್ಟುಕೊಂಡು. ವಿಷಯ ನಿರೂಪಣೆಗೆ ಸಹಾಯಕ ವಾಗಬಲ್ಲ ಹಲವಾರು ಪದ್ಯಗಳನ್ನು ಇಲ್ಲಿ ಬಳಸಿಕೊಂಡು ಜೀವನ ಧರ್ಮವನ್ನು ನಿರೂಪಿಸುವ ಪ್ರಯತ್ನ ಮಾಡಲಾಗಿದೆ.

ಜೀವನಧರ್ಮ ಸ್ವರೂಪವನ್ನು ತಿಳಿದುಕೊಳ್ಳುವ ಮುಂಚೆ ನಾವು ಎರಡು ಅಂಶಗಳನ್ನು ಗಮನದಲ್ಲಿಟ್ಟುಕೊಳ್ಳುವುದು ಅವಶ್ಯಕ. ಒಂದು: ಜನಪದ ಕವಿಗಳು ಜೀವನಧರ್ಮವನ್ನೇ ಕುರಿತು ವ್ಯವಸ್ಥಿತ ರೂಪದಲ್ಲಿ ಗೀತಗಳನ್ನು ಹೆಣೆಯಬೇಕೆಂದು ಹೊರಟವರಲ್ಲ. ಬದುಕಿನ ಆತ್ಮೀಯತೆಯ ಕಾರಣವಾಗಿ ಹೊರ ಹೊಮ್ಮಿದ ಭಾವನಾ ಲಹರಿಯ ವಿಸ್ತಾರವಾದ ಹಾಡುಗಳನ್ನು ನಾವು ಒಂದು ಕ್ರಮಕ್ಕೆ ಒಳಪಡಿಸಿದಾಗ ಅವು ಜನಪದ ಜೀವನ ದೃಷ್ಟಿಯನ್ನು, ಗತಿಬಿಂಬವನ್ನು, ಬಾಳಗುರಿಯ ಪಾರ ಮ್ಯವನ್ನು ಪರಿಚಯ ಮಾಡಿಕೊಡುತ್ತವೆ. ಎರಡನೆಯದು: ಜೀವನ ಧರ್ಮವನ್ನು ಕುರಿತು ಇಲ್ಲಿ ಬರುವ ವಿವರಣೆ ಸಿದ್ಧಾಂತ ಪ್ರತಿಪಾದನೆಯ ಸ್ವರೂಪದ್ದಲ್ಲ, ಎಂಬುದು. ನಮ್ಮವರ ಜೀವನ ಧರ್ಮ, ಬದುಕಿನ ಆಶೆ-ಆಕಾಂಕ್ಷೆ, ದುಡಿಮೆಯ ದೃಷ್ಟಿ,

ದೈವ-ದೇವರ ಸಂಬುಗೆ, ಭೂಮಿ-ಬಸವ-ನಿಸರ್ಗ, ತಾಯಿ-ತಂ
ಅಕ್ಕ-ಅಣ್ಣ, ತಮ್ಮ-ತಂಗಿ, ಗಂಡ-ಹೆಂಡತಿ, ವ್ಯಕ್ತಿ-ಸಮಾ
ಮೊದಲಾದ ನಾನಾ ಕ್ಷೇತ್ರಗಳನ್ನು ಸುತ್ತಿಕೊಂಡು ಬೆಳೆ
ಮಮತೆ, ಮರುಕಗಳ ಪರಿ. ಇಲ್ಲಿ ಜೀವನ ತತ್ವ ಚಿಂತನೆಯ
ಸೊಗಸಿನ ಹೊಳವು ಮೂಡಿದ್ದರೆ ಅದು ಅಯತ್ನಿಕವಾ
ರೂಪು ಪಡೆದದ್ದು. ಜೀವನಧರ್ಮದ ಪ್ರತಿಪಾದನ ಇ
ಮೂರ್ತಗೊಂಡು ಮತ, ಕಾಲ, ದೇಶಾತೀತವಾದ ಮಾನ
ಬಾಳಿನ ತತ್ವಗಳಿಗೆ ಬೇಕಾಗುವ ಸತ್ವವನ್ನು ಇವು ಪೂರೈಸ
ತ್ತವೆ. ಈ ದೃಷ್ಟಿಯಿಂದ ಈ ಸತ್ವವನ್ನು ಬೇಕಾದರೆ ಜೀವ
ಸಿದ್ಧಾಂತವೆಂದು ಇಟ್ಟುಕೊಳ್ಳಬಹುದಾಗಿದೆ. ಅದೇನೇ ಇದ್ದ
ಭೂತಕಾಲದ ಜನಪದ ಜೀವನದೃಷ್ಟಿ, ವರ್ತಮಾನ. ಭವಿಷ
ಜ್ಜೀವನವನ್ನು ಸುಂದರವಾಗಿ ರೂಪಿಸುವಲ್ಲಿ ಹಿಂದೆ ಬೀಳಲಾ
ದೆಂದು ನಿರ್ವಿವಾದವಾಗಿ ಹೇಳಬಹುದು ಭಾಷೆಯ ಅಂತರ
ಪ್ರದೇಶಗಳ ಭಿನ್ನತೆ, ಕೆಲವೊಂದು ಸಾಮಾಜಿಕ ವಿಭಿನ್ನತೆ
ಕಾಲ ಪ್ರಭಾವದ ಪರಿಣಾಮ ಇವುಗಳನ್ನು ಮರೆತು ಸವಿವಾ
ಪ್ರಪಂಚದ ಎಲ್ಲ ದೇಶಗಳ ಜನಪದ ಕಾವ್ಯವೂ ಜನ ಬದುಕಬ
ಸತ್ವಪೂರ್ಣ ಜೀವನ ಧರ್ಮವನ್ನು ಬಿಂಬಿಸುವಲ್ಲಿ ಒಂದೇ
ಬಗೆಯಾಗಿರುವುದನ್ನು ನಾವು ಕಾಣಬಹುದಾಗಿದೆ.



# ೨. ಬದುಕಿನಲ್ಲಿ ನಿಷ್ಠೆ

ವ್ಯಕ್ತಿಯಲ್ಲಿ ವಿಚಾರ ಶಕ್ತಿ, ಭಾವನಾ ಶಕ್ತಿ ವಿಕಾಸವಾಗ ತೊಡಗಿದಂತೆ ಅವನು ತನ್ನ ಜೀವನವನ್ನು, ಸಾಮಾಜಿಕ ಜೀವನವನ್ನು ಕುರಿತು ಚಿಂತಿಸತೊಡಗಿದ. ಈ ಜೀವನ ಬಂದುದೇಕೆ? ಇದನ್ನು ಬಾಳುವುದು ಹೇಗೆ? ಎನ್ನುವ ಪ್ರಶ್ನೆಗಳಿಗೆ ಬೌದ್ಧಿಕ ಚಿಂತನೆಯ ಉತ್ತರಗಳು ಶಿಷ್ಟ ಸಾಹಿತ್ಯದಲ್ಲಿ ದೊರೆಯುತ್ತವೆ. ವೇದೋಪನಿಷತ್ತುಗಳ ಕಾಲದಿಂದಲೇ ಋಷಿವರರು, ಕವಿಗಳು, ದಾರ್ಶನಿಕರು ಸಾಂದರ್ಭಿಕವಾಗಿ ಜೀವನದ ರೀತಿ, ನೀತಿಗಳನ್ನು ಕುರಿತು ವಿಚಾರಗಳನ್ನು ವ್ಯಕ್ತಪಡಿಸಿರುವರು. ಪ್ರಾಯಶಃ ಅಷ್ಟೇ ಪುರಾತನ ಕಾಲದಿಂದಲೂ ಜನಪದ ಕವಿಗಳು ಜೀವನದ ಧ್ಯೇಯೋದ್ದೇಶಗಳನ್ನು ತಿಳಿಯಪಡಿಸುವ ಪ್ರಯತ್ನ ಮಾಡಿದ್ದಾರೆ. ನಮ್ಮ ಜೀವನವನ್ನು ಕುರಿತು ವಿಮರ್ಶೆ ಮಾಡುವಾಗ ಕೆಲವು ವಿಮರ್ಶಕರು, ಭಾರತೀಯರು ಜನಪದ ಐಹಿಕ ಜೀವನವನ್ನು, ನಾಗರಿಕ ಜೀವನದ ಪ್ರಗತಿಯನ್ನು ದೂರವಾಗಿಟ್ಟು ಸದಾಕಾಲ ಪಾರಮಾರ್ಥವನ್ನೇ ಕುರಿತು ಚಿಂತಿಸುತ್ತಿದ್ದರು ಎಂದು ಹೇಳುವುದುಂಟು. ಆದರೆ ಈ ವಿಮರ್ಶೆ ಸತ್ಯಕ್ಕೆ ದೂರವಾಗಿದೆ ಎಂಬುದನ್ನು ಶಿಷ್ಟಸಾಹಿತ್ಯದ ಸಮಗ್ರ ದೃಷ್ಟಿಯ ಪರಿಶೀಲನೆಯಿಂದ ಕಾಣಬಹುದಲ್ಲದೆ, ಜನಪದ ಕಾವ್ಯವೂ ಈ ಹೇಳಿಕೆಯು ಹುರುಳಿಲ್ಲದ್ದು ಎಂಬುದನ್ನು ಸ್ಪಷ್ಟವಾಗಿ ಬಿಂಬಿಸುತ್ತದೆ. ಪ್ರಪಂಚದ ಪ್ರಸಿದ್ಧ ಮಹಾ ವ್ಯಕ್ತಿಗಳ

ಲ್ಲೊಬ್ಬನಾಗಿರುವ ರೋಮೇನ್ ರೋಲಾ (Romain Rolland) ಅವರು, 'ಮಾನವನು ಬಾಳುವೆಯ ಕನಸನ್ನು ಕಾಣಲು ಪ್ರಾರಂಭಿಸಿದ ಪ್ರಾಚೀನ ಕಾಲದಿಂದ ಮಾನವರ ಹೊಂಗನಸುಗಳಿಗೆಲ್ಲ ನೆಲೆಯು ದೊರೆತಿರುವ ಸ್ಥಳವು ಈ ಪ್ರಪಂಚದಲ್ಲಿದ್ದರೆ ಅದು ಭಾರತವೊಂದೇ' ಎಂದು ಹೇಳಿರುವು ದಲ್ಲದೆ ಯುರೋಪಿನ ನಾಗರಿಕತೆಯನ್ನು ಮತ್ತಷ್ಟು ಪುಷ್ಟೀಕರಿ ಸುವ ಸಾಮಗ್ರಿಗಳು ಭಾರತದಿಂದಲೇ ಲಭಿಸಬೇಕೆಂದು ಸೂಚಿ ಸಿದ್ದಾರೆ. ಎಂದಾಗ ಇಹ–ಪರಗಳನ್ನು ಒಂದುಗೂಡಿಸುವ ನಮ್ಮವರ ಬದುಕಿನ ಪರಿ ವ್ಯರ್ಥಭ್ರಮೆಯಾಗಿರಲಿಲ್ಲವೆಂಬುದು ಯಾರಿಗಾದರೂ ವೇದ್ಯವಾಗುವುದು. ಬದುಕಿನ ನಿಷ್ಠೆಯನ್ನು ವ್ಯಕ್ತಪಡಿಸುವ ಹಲವಾರು ಸುಂದರ ಪದ್ಯಗಳು ಜನಪದ ಕಾವ್ಯರಾಶಿಯಲ್ಲಿ ಸಿಕ್ಕುತ್ತವೆ.

ಗಂಡು ಹೊಡೆಯಲಿ ಭೂಮಿ ಹೆಣ್ಣು ಹೂಡಲಿ ಒಲೆಯ।
ಬಣ್ಣ ತೊಟ್ಟೀಲು ತೂಗಲಿ। ಶಿವರಾಯ
ಗಿಣ್ಣ ನಿನಗೆಡೆಯೊ ಕೈ ಮುಗಿದು॥

ಆಶಾವಾದಿಯಾದ ವ್ಯಕ್ತಿಯೊಬ್ಬನ ಜೀವನದ ಹುರುಪು–ಹುಮ್ಮಸ, ಹಾರೈಕೆಗಳ ಮಧುರ ಭಾವ ಇಲ್ಲಿ ವ್ಯಕ್ತವಾಗಿದೆ. ಮಕ್ಕಳ ಆನಂದದ ಸಮೃದ್ಧಿ, ಹೈನ-ಹಾಲುಗಳ ಸಮೃದ್ಧಿ ಉಂಟಾದಾಗ ದುಡಿಯುವ ಗಂಡ–ಹೆಂಡಿರು ಜೀವನದ ಸಂತೋಷವನ್ನು ಶಿವಕೃಪೆಯೆಂದು ಭಾವಿಸಿದ್ದಾರೆ. ಆಶಾ ವಾದಿಯ ಜೀವನ ಪ್ರಾರಂಭವಾಗುವುದರ ಸೊಗಸೇ ಹೀಗೆ!

ಇಂಥ ಆಶಾವಾದಿಯ ಸತಿ, ಜೀವನ ಸಾಗರವನ್ನೀಸಲು ಜಾಣೆ ಬೇಕೆಂದು ಹೀಗೆ ಸೂಚಿಸುತ್ತಾಳೆ ಜನಪದಕ್ಕೆ—

**ಸಂಸಾರವೆಂಬೂದು ಸಾಗರದ ಹೊಳೆಯುವ್ವ ।**
**ಈಸ ಬಲ್ಲವಗ ಎದೆಯುದ್ದ । ಗಿಳಿರಾವು**
**ಓದ ಬಲ್ಲವಗ ಕೈಲಾಸ ॥**

ಚತುರನಾದ ವ್ಯಕ್ತಿಗೆ ಸಂಸಾರ ಸಾಗರ ಎದೆಯುದ್ದ ಮಾತ್ರ. ಇದರ ಗಹನ, ಗೂಢಗಳನ್ನು ಪರಿಚಯ ಮಾಡಿಕೊಂಡವನು ಸುಲಲಿತವಾಗಿ ಈಜಾಡುತ್ತ ಇಹವನ್ನು ಗೆದ್ದು ಪರವನ್ನು ಪಡೆಯುತ್ತಾನೆ. ಈಸಲು ಬರುವುದಿಲ್ಲವೆಂದು ಮೂಢರಾಗಿ ಕೂಡ್ರುವುದರಲ್ಲಿ ಅರ್ಥವೇ ಇಲ್ಲ. ಏಕೆಂದರೆ ಮರ್ತ್ಯಕ್ಕೆ ಬಂದ ಬಳಿಕ ಬದುಕುವ ಕೆಚ್ಚನ್ನು ಬೆಳೆಸಿಕೊಳ್ಳಲೇ ಬೇಕು. ಜೀವನ ಮುಳ್ಳಿನ ಹಾಸಿಗೆ, ಬಿಡಿಸಲಾರದ ಗಂಟು ಎಂದು ಗೋಗರೆಯುವ ಜನಕ್ಕೆ ಗರತಿ ಹೇಳುತ್ತಾಳೆ—

**ಚಿಂತಿ ಮಾಡುವರೇನ ಅಂತರಿಲ್ಲದ ಗಂಗಾ।**
**ಚಿಂತ್ಯಾಗ ಕಾಯ ಇಳಿತರ । ಮರ್ತ್ಯದಾಗ**
**ಸಂತೋಷದಿಂದ್ಯಾರು ಇರುವರ ॥**

ಚಿಂತೆ ಜೀವನದಲ್ಲಿ ಯಾರಿಗಿಲ್ಲ ? ಆದರೆ ಅದನ್ನೇ ಹಚ್ಚಿಕೊಂಡು ಹೋದರೆ ದೇಹ ಬಡವಾಗುವುದು; ಜೀವನದುತ್ಸಾಹ ನಿರುತ್ಸಾಹಕ್ಕೆ ಇಳಿಯುವುದು ನಮಗಿಂತಲೂ ಹೆಚ್ಚು ಕಷ್ಟದಲ್ಲಿರುವವರನ್ನು ನೋಡಿ ನಾವು ಸುಖಿಗಳು. ಧನ್ಯರು ಎಂದು ಭಾವಿಸಿ ಬಾಳುವುದರಲ್ಲಿಯೇ ಬಾಳಿನ ಸೌಖ್ಯ ಅಡಗಿದೆ

ಎಂಬ ಗರತಿಯ ಧೈರ್ಯದ ವಚನದಲ್ಲಿ ನಿರಾಶೆಯ ಕತ್ತಲೆಯನ್ನು ಹೊಡೆದೋಡಿಸಬಲ್ಲ ಆಶಾ ಕಿರಣವಿದೆ. ಕಷ್ಟ ಬರುವು ದಿದ್ದರೆ ಬರಲಿ, 'ನಾಳೆ ಬಪ್ಪುದು ನಮಗಿಂದೇ ಬರಲಿ; ಇಂದು ಬಪ್ಪುದು ನಮಗೀಗಲೆ ಬರಲಿ' ಎಂದು ಮುನ್ನುಗ್ಗುವವರನ್ನು ದೇವರು ಮುಂದಕ್ಕೆ ಸಾಗಿಸುತ್ತಾನೆ.

ಶಿವಶಿವ ಎಂದರ ಸಿಡಿಲೆಲ್ಲ ಬಯಲಾಗಿ।
ಕಲ್ಲು ಬಂದೆರಗಿ। ಎಲೆ ಮನವೆ
ಶಿವನೆಂಬು ಶಬುದ ಬಿಡಬೇಡ ॥

ಬಾಳನ್ನು ನಂಬಿ, ಬಾಳಿನಂಬಿಗನನ್ನು ನಂಬಿ ನಮ್ಮ ಜೀವನ ದೋಣಿಯನ್ನು ತೇಲಬಿಟ್ಟರೆ ಸಿಡಿಲು. ಕಲ್ಲು ಬಂಡೆಗಳೂ ನಮ್ಮ ಕೂದಲನ್ನು ಕೊಂಕಿಸಲಾರವೆಂಬ ಭರವಸೆ ಅವರದು. ಬಂಡೆ, ಸಿಡಿಲುಗಳಿಗೇ ಜಗ್ಗದ ಅವರ ಜೀವನ ನಿಷ್ಠೆ ಸಂಸಾರದ ಸಣ್ಣ-ಪುಟ್ಟ ಉಪದ್ರವಗಳಿಗೆ ಸಡಿಲಾಗುವುದು ಸಾಧ್ಯವಿಲ್ಲ. ನಾನಾ ಬಗೆಯ ಎರಡು-ತೊಡರುಗಳನ್ನು ಸ್ಥೈರ್ಯ, ತಾಳ್ಮೆ, ಸರಸತೆಗಳಿಂದ ಗೆಲುವಿಗೆ ತಿರುಗಿಸಿ ಕೊಳ್ಳುವ ಅವರ ಜೀವನದ ಕಲೆ ಮೆಚ್ಚುವಂತಹದು.

ಬಡತನ ನನಗಿರಲಿ ಬಹಳ ಮಕ್ಕಳು ಇರಲಿ।
ನ್ಯಾಗ ಗುರುವಿನ ದಯೆ ಇರಲಿ। ನನ ಗುರುವೆ
ಬಡತನದ ಚಿಂತಿ ನನಗಿರಲಿ ॥

ಬಡತನ ಒಂದು ಭೀಕರ ಶಾಪವೆಂದು ಭಾವಿಸುವವರೇ ಬಹಳ ಜನ. ಆದರೆ ಗರತಿಯು ಜೀವನದ ನೆಮ್ಮದಿಯನ್ನು

ತನ್ನ ನಂಬಿದ ಪತಿ-ಪುತ್ರರನ್ನು ಮಣ್ಣು ಮುಕ್ಕುವಂತೆ ಮಾಡುವಳಲ್ಲದೆ ತಾನೂ ಮಣ್ಣು ತಿನ್ನುವಳೆಂದು ನಾಗರಿಕ ಜನಾಂಗ ಮೂಗು ಮುರಿಯಬಹುದು. ಗರತಿಯ ದೃಷ್ಟಿಯಲ್ಲಿ ಬಡತನ, ಬಹು ಸಂತಾನ ಬಾಳ ದುರಂತಗಳಲ್ಲ. ಶ್ರದ್ಧೆಯ ದುಡಿಮೆ, ದೇವನಂಬುಗೆಗಳಿಂದ ಬಾಳಿನ ಅರೆ-ಕೊರೆಗಳನ್ನು ದೂರ ಮಾಡಿಕೊಳ್ಳಲು ಸಾಧ್ಯವಿದೆ. 'ಹುಟ್ಟಿಸಿದ ದೇವರು ಹುಲ್ಲ ಮೇಯಿಸಲಾರ' ಎಂಬ ಶ್ರದ್ಧೆಯ ಸಂದೇಶ ಅವಳದು. ಕಠಿಣ ತಮ ಪ್ರತಿಕೂಲ ಸ್ಥಿತಿಗಳಲ್ಲಿಯೂ ಗರತಿಯದು ಅಪ್ರತಿಹತ ಜೀವನ ನಿಷ್ಠೆ.

ಆರಣ್ಯದಡವ್ಯಾಗ ಯಾರಾಣಿ ಕೊಡಲವ್ವ।
ಸೂರ್ಯ ನಿನ್ನಾಣಿ ಶಿವನಾಣಿ । ಕೊಟ್ಟೇನ
ಆರ್‍ಯಾಣ ಗೆದ್ದು ಬರುವೇನ ॥

ಬಾಳು ಅವಳನ್ನು ನಾನಾ ಬಗೆಯಿಂದ ಕಾಡಿಸಲಿ, ಗೆದ್ದು ಬರುತ್ತೇನೆ ಎಂದವಳು ಸೂರ್ಯ, ಶಿವರಾಣೆಯನ್ನಿಟ್ಟುಕೊಂಡು ಧೀರಳಾಗಿ ನುಡಿಯುತ್ತಾಳೆ. ಅವಳ ವಿಶ್ವಾಸ, 'ಕೊಲುವೆನೆಂಬ ಭಾಷೆ ದೇವನದು ಗೆಲುವೆನೆಂಬ ಭಾಷೆ ಭಕ್ತನದು' ಎಂಬ ವೀರ ಸಾಧಕನ ನುಡಿಯಲ್ಲಿಯ ನಿಷ್ಠೆಯನ್ನು ಮೊಳಗಿಸುತ್ತದೆ. ಸಂಸಾರ ಸಾಗರದಲ್ಲಿ ಇಂಥ ಮಹೇಶ ನಿಷ್ಠೆಯ ಹೆಣ್ಣಿಗೂ ಹಲವಾರು ಕಿರುಕುಳಗಳು ಕಾದಿರುತ್ತವೆ. ಕೈಹಿಡಿದ ಗಂಡನು ಕೈ ಮಾಡುವ ಪ್ರಸಂಗ. ಕೈಕೊಡುವ ಪ್ರಸಂಗ ಗರತಿಯ ಜೀವನದಲ್ಲಿ ಅನಿರೀಕ್ಷಿತಗಳೇನಲ್ಲ. ಆದರೆ ಗರತಿ ತನ್ನ ಮಾರ್ದವತೆಯಿಂದ, ಸರಸ, ಸಹನೆಗಳಿಂದ ಬಾಳನ್ನು ಒಡೆದು ಬೇಳೆ

ಮಾಡಲು ಇಚ್ಛಿಸುವುದಿಲ್ಲ. ಅವಳಿಗೆ ಬಾಳಿನಲ್ಲಿ ತುಂಬ ಪ್ರೇಮ. ಅದಕ್ಕಾಗಿ ಗಂಡ–ಹೆಂಡತಿಯರ ಜಗಳವನ್ನು ಒಮ್ಮ ಸುಂದರ ವಾಗಿ ವಿವರಿಸಿ ಹಸನ್ಮುಖಿಯಾಗಿ ಬಾಳುತ್ತಾಳೆ.

ಗಂಡ ಹೆಂಡಿರ ಜಗಳ ಗಂಧ ತೀಡಿದ ಹಾಂಗ।
ಲಿಂಗಕ್ಕ ನೀರು ಎರೆದ್ಹಾಂಗ। ಹಿರಿಹೊಳಿ
ಗಂಗವ್ವನ ಕೂಡಿ ನಲದ್ಹಾಂಗ॥

ಜಾಣ ಹೆಂಡತಿಗೆ, ಗಂಡ–ಹೆಂಡಿರ ಜಗಳ, ಕಲ್ಲಿಗೆ ಕಲ್ಲು ತಾಗಿ ಕಿಡಿ ಹಾರುವಂಥದಲ್ಲ; ಗಂಧವನ್ನು ತೀಡಿದ ಹಾಗೆ ಪರಿ ಮಳಯುಕ್ತ. ಗಂಡನ ಬೈಗುಳಗಳ ಸುರಿಮಳೆಯನ್ನು ಸರ ಮಾಲೆಯಾಗಿ ಕೊರಳಿಗೆ ತೊಟ್ಟುಕೊಂಡು ಸರಸದಿಂದ, ತಾಳ್ಮೆ ಯಿಂದ ಜೀವನಕ್ಕೆ ಗೆಲುವನ್ನು ತರುವ ಬಗೆ ಗರತಿಯದು. ಇಂಥ ತಾಳ್ಮೆಯ ಹೆಣ್ಣಿಗೆ ಗಂಡನ ಸ್ವೈರ ಪ್ರವೃತ್ತಿಯೂ ತಲೆ ಕೆಡಿಸುವಂತಹದಲ್ಲ. ಯಾರೋ ಚಾಡಿಖೋರಳು 'ನಿನ್ನ ಗಂಡ ಅಲ್ಲೊಬ್ಬಳ ಕೂಡ ನಗತಿದ್ದ; ನಿನಗೆ ಅದರ ಚಿಂತೆಯೇ ಇಲ್ಲೇನ ?' ಎಂದು ಚುಚ್ಚಿ ಮಾತನಾಡಿದರೆ–

ನಕ್ಕರ ನಗಲೆವ್ವ ನಗೆ ಮುಖದ ಕ್ಯಾದಿಗಿ।
ನಾ ಮುಚ್ಚಿ ಮುಡಿವ ಪರಿಮಳ। ದಾ ಹೂವ
ಅವಳೊಂದು ಗಳಿಗಿ ಮುಡಿಯಲಿ॥

ಎಂದು ಚಾಡಿಖೋರಳ ಮೂಗು ಕೊಯ್ದಂತೆ ಹೇಳಿ ಬಿಡುವಳು. ಬಾಳಿನ ಸಾಮರಸ್ಯವನ್ನು ಕಾಪಾಡಿಕೊಂಡು

ಹೋಗುವುದಕ್ಕೆ, ಹೆಣ್ಣು ತೋರಿಸುವ ಹೊಂದಾಣಿಕೆಯ ಗುಣ, ಸಹನ, ಸರಸಗಳು ಬಾಳನೋವಿಗೆ ಸಂಜೀವಿನಿ; ಬಾಳ ನಿಷ್ಠೆಗೆ ಪ್ರೋಷಕ ಎಂದು ಹೇಳಬಹುದಾಗಿದೆ. ಗಂಡ ಸವತಿಯನ್ನು ತಂದರೂ 'ತಂದರ ತರಲವ್ವ; ತಂಗಿಯಾಗೆ ಇರಲವ್ವ' ಎಂದು ಸಮಾಧಾನಿಯಾಗಿ ಉತ್ತರ ಕೊಟ್ಟು ಹೃದಯ ವೈಶಾಲ್ಯವನ್ನೇ ತೋರುವಳು. ಗಂಡಿನ ಕರ್ಕಶಗಳಿಗೆಲ್ಲ ಹೆಣ್ಣು ಹೀಗೆ ಗಂಧದ ಕೊರಡಾಗಿ ಸಿಕ್ಕು ಸವೆಯುತ್ತಲೆ ಸುಗಂಧವನ್ನು ಹರಡಿರುವುದರಿಂದ ಮಾನವನ ಬಾಳು ಸಾರ್ಥಕವಾಗಿದೆ. ಜೀವನದಲ್ಲಿ ನಂಜುಂಡರೂ ತನ್ನ ಹೃದಯಗಿಂಡಿಯಲ್ಲಿ ಪ್ರೇಮ, ವಾತ್ಸಲ್ಯ. ಸಹನೆ. ಸುಖಗಳ ಅಮೃತ ರಸವನ್ನೇ ಕೂಡಿ ಹಿಡಿದ ದೇವತೆಯವಳು. 'ಭಾಗಾದಿ ಬಲಕಿರಲಿ, ವೈರಿ ತಾ ಎಡಕಿರಲಿ ಚಾಡಿ ನಿನ ಮನಿಯು ಇದರಿರಲಿ ಬಲ ಭೀಮನ ದಯೆ' ಯಿಂದ ಎಲ್ಲವನ್ನು ಗೆದ್ದು ಬರುತ್ತೇನೆಂಬ ಧೈರ್ಯ ಅವಳದು. ಜೀವನದಲ್ಲಿ ಅವಳಿಗೆ ಜಿಗುಪ್ಸೆಯನ್ನುಂಟು ಮಾಡುವಂಥ ಶಕ್ತಿಗಳೇ ಇಲ್ಲವೇನೊ ಎಂದೆನಿಸುತ್ತದೆ ಒಂದೊಂದು ಸಲ. ಏಕೆಂದರೆ ಬಾಳಿನ ಎಂಥ ಭೀಕರ ವಿಷಮ ಸುಳಿಗಳನ್ನೂ ಅವಳು ಬಹು ಚಮತ್ಕಾರದಿಂದ ದಾಟಿ ನಿಲ್ಲುವ ಚದುರನ್ನು ಪಡೆದವಳು. ಗಂಡ, ಅತ್ತೆ-ಮಾವಂದಿರ ವಿರಸವಂತೂ ಸರಿಯೆ ! ಮಮತೆಯ ತಾಯಿಯ ಸಂಗಡಲೂ ಒಮ್ಮೊಮ್ಮೆ ಜಗಳ ಪ್ರಾರಂಭವಾಗುವದುಂಟು. ಆಗ ಮಗಳು ಬಾಳಿನ ರಸಿಕತೆಯನ್ನು ಕೆಡಿಸುವ ಗೆರೆಯನ್ನು ದಾಟದೆ ಸಾವರಿಸಿಕೊಳ್ಳುವ ಪರಿ ಬಹು ಸೊಗಸಾದುದು. 'ತಾಯಿಮಕ್ಕಳ ಜಗಳ ತಾಳ ಬಾರಿಸಿದ ಹಾಗೆ' ಮಗಳಿಗೆ. ಅದಕ್ಕೆಂದೆ ತಾಯಿ

ಮಕ್ಕಳ ಜಗಳ ನ್ಯಾಯ ಮಾಡುವರ್‍ಯಾರ? ಪಾಲಿಗೆ ಮು
ವಜರ್ನೇನ? ಹಡದವ್ವ ನಾಸಾಡಿದ ಮಾತು ನಿಜವೇನ? ಎಂ
ರಸಿಕ ಮಾತುಗಳನ್ನಾಡುತ್ತ ಮಾತೃವಾತ್ಸಲ್ಯಕ್ಕೆ ಹೊಸ
ಮೂಡಿ ಬರುವಂತೆ ಮಾಡುವಳು. ಬಾಳಿನ ರಂಗದಲ್ಲಿ ಎಲ್ಲಿ
ಕದನವಿರಲಿ. ಅದಕ್ಕೆ ಸೊಗಸಿನ ಲೇಪ ಕೊಟ್ಟು ಸಂಕಟವನ
ದೂರ ಮಾಡಿಕೊಳ್ಳುವ ಜೀವನಕಲೆ ಗರತಿಗೆ ಕರತಲಾಮಲ
ಮರ್ತ್ಯಕ್ಕೆ ಹುಟ್ಟಬಂದ ಮೇಲೆ, ನನ್ನ ಜನ್ಮವನ್ನು ವ್ಯ
ಮಾಡಬೇಡ, ಶರ್ತ ಮಾಡಿ ದುಡಿಯುತ್ತೇನೆ ಎಂದು ಆರ್ತಧ
ಯಿಂದ ಪರಮಾತ್ಮನನ್ನು ಬೇಡಿಕೊಳ್ಳುವ ಹೆಣ್ಣಿನಲ್ಲಿ ಬಾ
ಕುಡಿ ಹಸುರಾಗಿ ಚಿಗಿಯುತ್ತ ಮುಂದುವರಿಯುತ್ತದೆ.

ಇಂಥ ಜೀವನ ನಿಷ್ಠೆಯಿಂದ ತುಂಬಿ ನಿಂತ ಜೀ
ಮರ್ತ್ಯಕ್ಕೆ ಮಹತ್ತನ್ನು ತರಬಲ್ಲುದು. ಇವರಿಗೆ ಹುಟ್ಟು
ಸಾವು ಮುಖ್ಯವಲ್ಲ. ಏಕೆಂದರೆ ಇವೆರಡೂ ಮಾನವನ ಕೈ
ಲ್ಲಿಲ್ಲ; ಇವೆರಡರ ಮಧ್ಯದ ಜೀವನಾವಧಿ ತನ್ನ ಬದುಕಿಗೆ ಸಾ
ಯಾಗಿ ನಿಲ್ಲುವ ಅವಧಿ; ಇದು ನಿಷ್ಠೆ, ಅಭಿಮಾನಗಳಿ
ತುಂಬಿರಬೇಕು ಎನ್ನುವುದೇ ಅವರ ಜೀವನ ಮಂತ್ರ.

**ಕರುಣ ಬಂದರ ಕಾಯೊ ಮರಣ ಬಂದರೆ ಒಯ್ಯೊ।**
**ಕರುಣಿ ಕಲ್ಯಾಣ ಬಸವಣ್ಣ। ಕಾಶಿಲಿಂಗ**
**ಕಡೆತನಕ ಕಾಯೊ ಅಭಿಮಾನ ॥**

ಹುಟ್ಟು, ಸಾವುಗಳು ಶಿವನ ಕರುಣೆಗೆ ಸೇರಿದವುಗಳು. ಅ
ತನ್ನ ಅಭಿಮಾನವನ್ನು ಕಾಯುವ ಕರುಣೆಯನ್ನು ಮಾ

ದೇವರು ತನಗೆ ತೋರಿಸಬೇಕೆಂದು ಬೇಡಿಕೊಳ್ಳುತ್ತಾನೆ ನಮ್ಮ ಗ್ರಾಮೀಣ ಬಾಂಧವನೊಬ್ಬ. ಅಭಿಮಾನವಿಲ್ಲದ ಬಾಳು ನಾಯಿ ಬಾಳು ಅವರ ಪಾಲಿಗೆ. ಜೀವನದ ಸುಖ. ದುಃಖಗಳನ್ನು ಹೀಗೆ ನಿಸ್ಸಂಗ ಭಾವನೆಯಿಂದ ಕಂಡು ರಸಾನಂದವನ್ನು ಪಡೆದುದ ರಿಂದಲೆ ಅವರ ಪರಿಪಕ್ವ ಮತಿ ಮರಣವನ್ನೂ ಮಹಾನವಮಿ ಯಂತೆ ಕರೆದು ಬಾಳಿನ ಸುಂದರ ಚರಮ ಗೀತೆ ಹಾಡುತ್ತದೆ ಹೀಗೆ—

ಎಂದು ಬಾರದ ನೀವು ಇಂದೇಕೆ ಬಂದಿರಿ ।
ಕೊಳ್ಳಯ್ಯ ನೀರ ಕುಡಿನೀರ। ಜವರಾಯ ॥
ಕೊಳ್ಳಯ್ಯ ನೀರ ಕುಡಿನೀರ

ಇಹಲೋಕ ಯಾತ್ರೆ ಮುಗಿಯಿತು, ನಡೆಯಿರಿನ್ನು ಎಂದು ಕರೆ ಯುವ ಕರಾಳ ಯಮರಾಯನನ್ನೂ ಇವರು ಅತಿಥಿಯಂತೆ ಸತ್ಕರಿಸಿ, ಬಾಳಿನ ಕೊನೆಯನ್ನು ಶಾಂತಿ, ಸಮಾಧಾನಗಳಿಂದ ಎದುರಿಸಿದ ಧೀರರು. ಯಮರಾಜನು ಇವರ ಜೀವವನ್ನೊಯ್ಯ ಬಹುದು. ಆದರೆ ಅವರ ಜೀವನವನ್ನು ಕಿತ್ತುಕೊಂಡು ಹೋಗ ಲಾರ. ಶ್ರದ್ಧೆಯ ಬೇರನ್ನು ಭೂಮಿಯಲ್ಲಿ ಚಾಚಿ ಅವರು ನೆಲದ ಜೀವನಕ್ಕೆ ಅಗಣಿತ ಬೆಲೆಯನ್ನು ತಂದುಕೊಟ್ಟವರು. ಅಂಥ ಬಾಳಿನ ಸತ್ವವನ್ನು ಯಾರೂ ಕೊಲ್ಲಲಾರರು. "ಎಲ್ಲ ಕ್ಕಿಂತ ಸತ್ಯ ದೊಡ್ಡದು. ಜೀವನವನ್ನೆದುರಿಸುವಂತೆ ನೀವು ಸಾವನ್ನೂ ತಾಳ್ಮೆಯಿಂದ, ಶಾಂತತೆಯಿಂದ ಎದುರಿಸಬೇಕು. ಸಾವನ್ನು ಅತಿಥಿಯಂತೆ ಸ್ವಾಗತಿಸಬೇಕು. ನನ್ನ ಮರಣಕ್ಕೆ

ಶೋಕಿಸಬೇಡಿ ಆತ್ಮಕ್ಕೆ ನಾಶವಿಲ್ಲ. ಸಾವು ನಮ್ಮನ್ನು ಈ ಕ್ಷಣಿಕವಾದ ಪ್ರಪಂಚದಿಂದ, ಅನಂತವಾದ, ಶಾಶ್ವತವಾದ ಸ್ವರ್ಗಕ್ಕೆ ದೇವ ಸಾನಿಧ್ಯಕ್ಕೆ ಒಯ್ಯುವ ಮಹಾದ್ವಾರ ಎಂದು ಹೇಳಿದ ಮಹಾತ್ಮಾ ಯೇಸುವಿನ ಮಾತಿನ ತಿರುಳು ಹದವಾಗಿ ನಮ್ಮವರ ಜೀವನ ದೃಷ್ಟಿಯಲ್ಲಿ ಮೇಳೈಸಿರುವುದನ್ನು ಕಾಣಬೇಕು.

ಬಡತನದಲ್ಲಿ ಹುಟ್ಟಿ, ದುಡಿಮೆಯೊಡನೆ ಬೆಳೆದು, ತಾಪ ತ್ರಗಳನ್ನು ಜೀವನದುದ್ದಕ್ಕು ಕಾಣುತ್ತಿದ್ದರೂ ನಮ್ಮ ಜನಪದ ಇಂಥ ಜೀವನ ನಿಷ್ಠೆಯನ್ನು ತೋರಿಸಿದೆ. ನಗುನಗುತ ಬಾಳಿದೆ ಈ ಬಾಳ ಹಿರಿಮೆಯ ದೃಷ್ಟಿ ನಮಗೆ ಹೆಮ್ಮೆಯನ್ನುಂಟು ಮಾಡದೆ ಇರದು.

ಜೀವನದೊಂದು ಕಲೆ ಕಲೆಯ ಕಲಿಸುವುದೆಂತು? ।
ಸಾವಿರದ ನಿಯಮ ಯುಕ್ತಿಗಳನೊರೆದೊಡೆಯುಂ ।
ಆವುದೋ ಕುಶಲತೆಯದೊಂದಿರದೆ ಜಯವಿರದು ।
ಆ ವಿವರ ನಿನ್ನೊಳಗೆ ಮಂಕುತಿಮ್ಮ ॥

ಎಂಬ ಡಿ. ವಿ. ಜಿ. ಯವರ ಪದ್ಯದಲ್ಲಿಯ ಆವುದೋ ಕುಶಲ ಕಲೆಯನ್ನವರು ಹೊಂದಿ ಜೀವನದ ಜಯಗೀತೆಯನ್ನು ಹಾಡಿದ್ದಾರೆ.

...........

# ೩. ದುಡಿತವೇ ಬಾಳ ಮಂತ್ರ

ಮಾನವ ಕೋಟಿ ಬದುಕಲು ಹರಗಿದ ಹೊಲ, ತಿರುಗುವ ಕಲ್ಲು ಅತ್ಯಾವಶ್ಯಕ. ಮಾನವನು ನೆಲದ ಮಡಲಿಗೆ ದುಡಿಯಲಿಳಿದುದೇ ಅವನ ಭೂಮಿತಾಯಿಯ ಮೊದಲ ಸಂಗವೆಂಬಂತೆ ಕಾಣುತ್ತದೆ. ಬೀಸುವ ಕಲ್ಲಿನ ಗರತಿಯೂ ದುಡಿಮೆಯಲ್ಲಿ ಗಂಡಿಗೆ ಕೈಕೂಡಿಸಿದಳು. ಜೀವನವನ್ನು ನಿಷ್ಠೆಯಿಂದ ಬಾಳಲು ನಿಶ್ಚಯಿಸಿದ ಇವರು, ದುಡಿತವು ಬಾಳಸುಖದ ಬೆನ್ನೆಲುಬು ಎಂಬುದನ್ನು ಅರಿತವರಾಗಿದ್ದರು. ರಂಟೆ-ಕುಂಟೆ-ಮೊಟ್ಟೆ ಹೊಡೆಯುವ, ಹಿಟ್ಟು ಬೀಸುವ, ನಾಟಿ ಹಾಕುವ, ಕಸ ತೆಗೆಯುವ, ಹಂತಿ–ರಾಶಿ ಮಾಡುವ ಇಂಥ ಹಲವಾರು ದುಡಿತದ ಪ್ರಸಂಗಗಳಲ್ಲಿ ಹೊರಹೊಮ್ಮಿ ಬಂದಿರುವ ಅವರ ಹಾಡುಗಳು 'ಕಾಯಕವೇ ಕೈಲಾಸ' ವೆಂಬುದು ಅವರ ಬಾಳ ಮಂತ್ರವಾಗಿದ್ದಿತು ಎಂಬುದನ್ನು ತಿಳಿಸುತ್ತವೆ. ನಮ್ಮವರು ದುಡಿಯುತ್ತಲೇ ಹಾಡಿದವರು. ದುಡಿಮೆಯ ಶ್ರಮವನ್ನು ಹಾಡಿನ ಹರುಷದಲ್ಲಿ ಕಳೆದುಕೊಂಡು ಕಾಯಕ ತತ್ವವನ್ನು ಬಿತ್ತರಿಸಿದವರು.

ಲೋಕಕ್ಕೆ ಅನ್ನವನ್ನೀಯುವ ಗುರುತರವೂ, ಪವಿತ್ರವೂ ಆದ ಹೊಣೆ ತಮ್ಮದಾಗಿದ್ದರೂ ಅದನ್ನು ಹೆಮ್ಮೆಯಿಂದ ಹೇಳಿಕೊಳ್ಳದೆ ವಿನಮ್ರರಾಗಿ ಎಲ್ಲವೂ ಶಿವನ ಸೊಮ್ಮೆಂದು ತಿಳಿದು ಬಾಳಿರುವುದು ನಾವು ಅವರ ದುಡಿಮೆಯಲ್ಲಿ ಮೊದಲು ಗುರುತಿಸಿಕೊಳ್ಳುವ ಅಂಶ. ಎಳ್ಳು–ಜೀರಿಗೆ ಬೆಳೆಯುವ ನೆಲ ಅವರಿಗೆ

ಭೂಮಿ ತಾಯಿ. ಬೀಸುವ ಕಲ್ಲು, ಬೇಸಾಯದ ಉಪಕರಣಗಳು, ಬಸವ ಎಲ್ಲಾ ಪೂಜ್ಯ ವಸ್ತುಗಳು. ಅವರ ಕಾಯಕದ ನಾಂದಿ ಈ ಭಾವನೆಯಿಂದ ಪ್ರೇರೇಪಿತವಾಗಿ ಜೀವನದಲ್ಲೆಲ್ಲ ಓತಪ್ರೋತವಾಗಿ ತುಂಬಿಕೊಳ್ಳುತ್ತದೆ.

ನನ್ನದೆನ್ನುವ ಬದುಕು ಸೊಮ್ಮು ಶಿವನದು ಕಾಣೊ।
ಹುಮ್ಮಸವು ಬೇಡ ರೈತನಿಗೆ। ಕೈಲಾಸ
ಒಮ್ಮನದಿ ನೀಡೆ ಕೈಮುಂದೆ ॥

ಸರ್ವಾರ್ಪಣ ಭಾವದ ದುಡಿಮೆ, ದುಡಿಮೆಯ ಫಲವಾಗಿ ಬಂದುದನ್ನು ಪರರಿಗೂ ನೀಡುವ ಪರಿ, ಇವರಿಂದ ದೊರೆಯುವ ಮಹತ್ತು ಈ ಮೂರು ಮಹವಂಶಗಳನ್ನು ಈ ಚಿಕ್ಕ ಪದ್ಯ ವ್ಯಕ್ತಗೊಳಿಸುತ್ತದೆ. ಬದುಕೆಲ್ಲ ಭಗವಂತನದು. ಮನುಷ್ಯನಿಗೆ ನನ್ನದು ಎನ್ನುವ ಹುಮ್ಮಸ, ಅಹಂಕಾರ ಬರಬಾರದು. ಪಡೆದುದನ್ನು ಒಮ್ಮನದಿಂದ ಪರರಿಗೂ ಕೊಟ್ಟು ತಾನೂ ಸವಿದು ಬಾಳಿದರೆ ಕೈಲಾಸ ಇಲ್ಲಿಯೇ ಸಿಕ್ಕುತ್ತದೆ. ಜೀವನದ ಸಮೃದ್ಧಿಗೆ, ಉದಾತ್ತ ಸಂಸ್ಕೃತಿಗೆ ಇಂಥ ದುಡಿಮೆ ರಾಜಮಾರ್ಗ ಹಾಕಿಕೊಡಬಲ್ಲುದು.

ದುಡಿಮೆಯಲ್ಲಿ ನಿತ್ಯವೂ ಸಹಕರಿಸಿ ನಿಲ್ಲುವ ಬಸವ, ಭೂಮಿ, ದನಕರುಗಳಲ್ಲಿ ಅವರಿಗೆ ಅಪಾರ ಆತ್ಮೀಯತೆ. ಅವೆಲ್ಲ ಅವರಿಗೆ ಜೀವನದ ಉಸಿರೇ ಎಂದು ಹೇಳಬಹುದು. ದುಡಿಮೆಯೊಡನೆ ತಾದಾತ್ಮ್ಯಭಾವ, ಕಾಯಕಕ್ಕೆ ಸಹಾಯಕವಾಗಿ

ರುವ ವಸ್ತು-ಪ್ರಾಣಿಗಳಲ್ಲಿ ಅಪಾರ, ಅನ್ಯೋನ್ಯ ಪ್ರೀತಿ ಇರದಿದ್ದರೆ ದುಡಿಮೆಯಲ್ಲಿ ಸೊಗಸೆಂಬುದೇ ಶೂನ್ಯವಾಗುವುದು. ದುಡಿಮೆ ಕರ್ಮದ ಗಾಣವಾಗುವದು.

ಮಣ್ಣನ್ನು ನಂಬಿ ನಾ ಮಣ್ಣಿಂದ ಬದುಕೇನು|
ಮಣ್ಣನಗೆ ಮುಂದೆ ಹೊನ್ನು| ಅಣ್ಣಯ್ಯ |
ಮಣ್ಣೆ ಲೋಕದಲಿ ಬೆಲೆಯಾದ್ದು ||

ಇಲ್ಲಿ ಮಣ್ಣಿಂದ ಬದುಕು, ಮಣ್ಣು ಹೊನ್ನು ಎನ್ನುವ ತಿಳಿವಳಿಕೆ ದಾರ್ಶನಿಕ ಪ್ರಜ್ಞೆಯಾಗಿದೆ. ಯಾವುದರ ಮೇಲೆ ಈ ಲೋಕಜೀವನಪಾಟ ಸಾಗುತ್ತಿದೆಯೊ ಆ ಭೂಮಿತಾಯಿಯೇ ಇರದಿದ್ದರೆ ನಮ್ಮ ಬದುಕಿಗೆ ಅಸ್ತಿತ್ವವೆಲ್ಲಿಯದು ? ಸಕಲ ಪದಾರ್ಥಗಳನ್ನು ಧರೆ ಹಡೆಯಲು ಬಲ್ಲುದು. ಆದರೆ ಧರೆಯನ್ನು ಹಡೆಯಬಲ್ಲ ವಸ್ತು ಎಲ್ಲಿದೆ ? ಆದುದರಿಂದ ಮಣ್ಣೇ ಲೋಕದಲ್ಲಿ ಬೆಲೆಯಾದದ್ದು. ಈ ತತ್ವವನ್ನು ಬಹು ಸುಲಲಿತವಾಗಿ ಓರ್ವ ಗರತಿ ಅಣ್ಣನಿಗೆ ಸಾರುವ ಕಲ್ಪನೆ ಎಷ್ಟು ಸುಂದರ! ಈ ಮೃಣ್ಮಯ ಭೂಮಿ ಚೇತನಗೊಂಡು ಚಿನ್ಮಯ ಶರೀರದ ಮಕ್ಕಳಿಗೆ ಜನ್ಮ ಕೊಡಬಲ್ಲುದು ಭೂಮಿತಾಯಿಯನ್ನು ಯಾರೂ ಆಧರಿಸಿ ಕಾಯುತ್ತಿಲ್ಲ. ಆದರೂ ಆ ಮಹಾತಾಯಿ ಜೀವ-ಜೀವಾಳಿಗಳನ್ನು ಹಡೆದು, 'ಬಹುರಸದ ಮೊಲೆಯುಣಿಸಿ' ಪೊರೆಯುತ್ತಿದ್ದಾಳೆ, ಬಹುರತ್ನಗಳು ಜನಿಸುವಂತೆ ಕೃಪೆದೋರಿ ಬಾಳಿನ ಮೇಲ್ಮೆಗೆ ಕಾರಣಳಾಗಿದ್ದಾಳೆ. ದುಡಿಯುವವರ ಕಣ್ಣು ಈ ಹಿರಿಮೆಯನ್ನು ಗುರುತಿಸಿಕೊಂಡಿರುವುದು ಬಾಳಿಗೆ ಭಾಗ್ಯವನ್ನು ತಂದುಕೊಟ್ಟಿದೆ.

ದುಡಿಮೆಯೊಡನೆ ಕೂಡಿ ಮೈಬೆವರು ಹರಿಸುವ ಬ
ವಣ್ಣ ಅವರ ಪಂಚಪ್ರಾಣ. ಬಸವನನ್ನು ಅವರು ಎತ್ತು ಎಂದ
ಸಹ ಕರೆಯಲಾರರು ಏಕೆಂದರೆ ಅವನ ಮಹಾತ್ಮೆ ದೊಡ್ಡದು
ಸುತ್ತೇಳು ಲೋಕಗಳನ್ನು ಮೆರೆಯುವ ದೊಡ್ಡ ವ್ಯಕ್ತಿ ಅವನು
ಬಸವನ ಮಹಿಮೆಯನ್ನವರು ಹೀಗೆ ಸಾರುತ್ತಾರೆ.

**ಭೂಮಿ ಹುಟ್ಟುವ ಮೊದಲು ಭೂಮಿ ಕಟ್ಟಿದ ಮೊದಲು।**
**ಭೂಪ ಹುಟ್ಟಿದ ಬಸವಯ್ಯ ! ಮ್ಯಾಗೀನ**
**ಶಿವಗೇಳು ದಿನಕ ಹಿರಿಯಾನ ॥**

ದುಡಿಮೆಗೆಲ್ಲ ಶ್ರೀಕಾರವನ್ನು ಬರೆಯುವ ಬಸವ ನೆರೆಯುತ್ತಿ
ವಾಗ ಬಹುಶಃ ಅವರು ಭಗವಂತನನ್ನು ಬಯಸಿದವರಲ್ಲವೆಂದ
ಕಾಣುತ್ತದೆ. ಬಸವ ಶಿವನಿಗಿಂತ ಏಳು ದಿನಕೆ ಹಿರಿಯನೆಂದ
ಸಾರಿ ಕರ್ಮಯೋಗಿಯ ಹಿರಿಮೆ ದೊಡ್ಡದು ಎಂಬ ವಿಶಾಲ
ರ್ಥವನ್ನು ಜಗತ್ತಿಗೆ ತೋರಿಸಿಕೊಡುತ್ತಾನೆ ನೇಗಿಲಯೋಗಿ
ಅದರ ಜೊತೆಜೊತೆಯಲ್ಲಿ ದೇವತ್ವದ ನಾನಾ ಮುಖಗಳ ಪರಿಚ
ಯವನ್ನು ಮಾಡಿಕೊಡುವನು. ಒಕ್ಕಲಿಗನ ಬಂಡಿಯ ವಣ
ನೆಯೂ ಸುಂದರವಾದುದು. ದುಡಿಮೆಯ ಕಾಯಕದಲ್ಲಿ ಪ್ರಾಣಿ
ವಸ್ತುಗಳು ಬಾಳ ಪಾರಮ್ಯವಾಗಿರುವಂತೆ ಅವನಿಗೆ ದುಡಿತ
ಯಾವ ಭಾಗವೂ ಆಪ್ಯಾಯಮಾನ.

**ಕಸವ ಹೊಡೆದಾ ಕೈ ಕಸ್ತೂರಿ ನಾತಾವ।**
**ಬಸವಣ್ಣ ನಿನ್ನ ಸೆಗಣೀಯ। ಬಳಿದ ಕೈ**
**ಎಸಳ ಯಾಲಕ್ಕಿ ಗೊನಿ ನಾತ ॥**

ಕಾಯಕದಲ್ಲಿ ಮೇಲು-ಕೀಳುಗಳನ್ನೆಣಿಸಿದವನಿಗೆ ಕರ್ಮಯೋ
ಗದ ಕನಸು ನನಸಾಗಲಾರದು ದನ–ಕರುಗಳ ಕಾಲದಲ್ಲಿಯ
ಕಸ, ಸಗಣಿಯನ್ನು ಎಷ್ಟು ಆನಂದ, ಕಾರ್ಯತತ್ಪರತೆಗಳಿಂದ
ಬಳಿಯ ಎತ್ತಿದ್ದಾನೆ ಈ ನೇಗಿಲಯೋಗಿ. ಅದು ಅವನಿಗೆ ಕೇವಲ
ಸಗಣಿಯಲ್ಲ. ಭೂಮಿ ಬೆಳೆಯಲು ಬಸವ ಕೊಡುವ ಕಸುವು.
ಈ ಅರಿವು ಅವನಲ್ಲಿ ಜಾಗ್ರತವಾಗಿರುವುದರಿಂದಲೆ ಕಸ ಬಳಿ
ಯುವ ಕೆಲಸ ಆನಂದಮಯ ಕಾಯಕವಾಗಿದೆ. ಸಗಣಿಯ
ಸಂಗದಲ್ಲಿರುವ ಹಸ್ತ ಎಸಳ ಯಾಲಕ್ಕಿಯ ಮಧುರ ವಾಸನೆ
ಯನ್ನು ಬೀರುತ್ತಿರುತ್ತದೆ. ಇದು ಶ್ರದ್ಧೆಯ ಸಿದ್ಧಿ. ಇಂಥ ಕೈ,
ಮನಸ್ಸುಗಳನ್ನು ಪಡೆದ ಮನೆ ಲಕ್ಷ್ಮಿಯ ನಿವಾಸವಾಗದೆ ?
ಯುವಕ ಒಕ್ಕಲಿಗನೊಬ್ಬ ಇದೇ ಕಾಯಕವನ್ನು ಶ್ರದ್ಧೆಯಿಂದ
ಮಾಡುತ್ತಿರುವ ಹೆಣ್ಣನ್ನು ಕುರಿತು ಈ ತತ್ವವನ್ನು ವಿವರಿಸು
ತ್ತಾನೆ.

**ಕಸನ ಗುಡಿಸುವ ಹೆಣ್ಣೆ ಹಸನಾಯ್ತು ನಿನ್ನಟ್ಟಿ ।**
**ಹಸುಗೂಸಿನ್ಹಾಂಗ ನಿನ ತಿಪ್ಪಿ। ದಿನದಿನಕ**
**ಬೆಳೆದು ಬಂಗಾರ ತರತಾವೊ॥**

ಸಗಣಿ ಗೊಬ್ಬರ ಸುವರ್ಣ ಸಮಾನ! ಇದರ ಮರ್ಮವನ್ನು
ಎಂದೋ ಈ ದುಡಿವ ಜಾಣರು ಕಂಡುಕೊಂಡಿದ್ದಾರೆ. ಹಸು
ಗೂಸು ಮನೆಯ ಸೊಗಸನ್ನು ಉಕ್ಕಿಸುತ್ತ ಬೆಳೆಯುವಂತೆ,
ದಿನದಿನಕ ಬೆಳೆಯುವ ಗೊಬ್ಬರದ ತಿಪ್ಪಿ, ಭೂದೇವಿಯ ಬೆಳೆವ
ಶಕ್ತಿಯನ್ನು ಉಕ್ಕಿಸುತ್ತ ಸುಗ್ಗಿ ಸೂರೆಗೊಳ್ಳುವಂತೆ ಮಾಡು

ವುದು, ಬಂಗಾರವನ್ನು ತಂದು ತುಂಬುವುದು. ಇದರಿಂದ ಜಗ
ತ್ತಿನ ಬದುಕಿಗೆ ಗೆಲುವು. ಹೊಸ ಬಂಡಿಯ ಮೇಲೆ ಹಸುವಿ
ಗೊಬ್ಬರ ತಂದು ಹಸಿದ ಭೂದೇವಿಗೆ ಹಾಕಿ. ಹಸಿದ ಮಕ್ಕ
ಕಾಯವ್ವ ನನತಾಯಿ ಎಂದು ಭೂದೇವಿಯನ್ನು ಪ್ರಾರ್ಥಿಸಿ
ಉಳುಮೆಯನ್ನು ಪ್ರಾರಂಭಿಸುತ್ತಾನೆ ಒಕ್ಕಲಿಗ. ಮಳೆರಾ
ಯನ ಕೃಪೆಯೂ ಇಂಥ ನಿರ್ಮಲ ದುಡಿಮೆಗೆ ಒದಗಿ ಬರು
ತ್ತದೆ. ಲೋಕದ ಅನ್ನದಾತ ಬಿತ್ತಲು ಆರಂಭಿಸಿ ಹೀಗೆ ದನಿ
ಗೆದು ಲೋಕೋತ್ತರ ನೀತಿಯನ್ನು ನುಡಿಯುತ್ತಾನೆ-

ಕಡೆಯ ಬಲಕಿನ ತಾಳು ಎಡೆಯಾಯ್ತು ಅರಸಗ|
ಎಡಗಡೆಯ ತಾಳು ಪಶು ಪಕ್ಷಿ| ಜೀವನಕ
ನಡುವಿನ ತಾಳು ರೈತನಿಗೆ

ರೈತನ ದುಡಿಮೆಯ ನೀತಿ ಸಮತಾವಾದದ, ಅಷ್ಟೇ ಅ
ಲೋಕೋದ್ಧಾರದ ತತ್ವಕ್ಕೆ ಕಳಸವಿಡುತ್ತದೆ. ದುಡಿಯು
ಹೆಮ್ಮೆಯಲ್ಲವನು ರಾಷ್ಟ್ರ ಜೀವನವನ್ನು ಮರೆತಿಲ್ಲ; ಪಶು-ಪ
ಗಳನ್ನು ಮರೆತಿಲ್ಲ. ಕೊನೆಯಲ್ಲಿ ತನ್ನನ್ನು ಸೇರಿಸಿಕೊಂಡಿದ್ದಾನೆ
'ಹಸಿದ ಮಕ್ಕಳ ಕಾಯವ್ವ' ಎಂಬ ಅವನ ಮೊರೆ ಹುಸಿಯಾ
ಗುವದಿಲ್ಲ. ಹತ್ತು ಹೂವಿನ ಸೀರಿ, ತೆಕ್ಕಿ ತುಂಬ ನಿರಿಗೆಯ
ಬೆಳೆದೇವಿ ಬಿಚ್ಚಿ ಹರವಿ ಹುಲುಸಾಗಿ ಬೆಳೆದಿದ್ದಾಳೆ. ಒಂದ
ಕಡೆಗೆ ಭೂಸಿರಿಯನ್ನು ಕಂಡು ಕೃತಜ್ಞತಾ ಭಾವ ಅವನ
ತುಂಬಿ ಸೂಸುತ್ತಿದ್ದರೆ. ಇನ್ನೊಂದು ಕಡೆಯಲ್ಲಿ ಈ ಸಿರಿ
ಕಾರಣವಾಗಿ ಹೆಗಲುಗೊಟ್ಟು ದುಡಿದ ಬಸವನನ್ನು ದರ್ಶಿ

ಋಣಭಾವ ಉಕ್ಕೇರಿ ಬರುತ್ತದೆ–

ಬೆಳೆಯಾಗಿ ಬಂದೈತಿ ಬಸವ ನಿಮ ದಯದಿಂದ|
ಹಂಪಿ ಜಾತ್ರೀಗೆ ಹೋಗ್ತೀನಿ| ನಿಮಗಾಗಿ
ಹುರಿಗೆಜ್ಜಿ ಗಂಟೆ ತರತೀನಿ||

ಎಂದು ಭಾವ ತುಂಬಿ ಹಾಡುತ್ತಾನೆ. ಬಸವನ ದಯೆ, ಭೂಮಿ ತಾಯಿಯ ಕೃಪೆ ಕೂಡಿ ಬಂದರೆ ಅವನಿಗೆ ಹಂಪೆಯ ಜಾತ್ರೆ. ಬಸವಣ್ಣನಲ್ಲಿ ಅವನಿಗೆ ಭಕ್ತಿ ಇರುವಂತೆ ಆತ್ಮೀಯ ಸಲುಗೆಯೂ ಇದೆ. ಹುರಿಗೆಜ್ಜೆ, ಗಂಟೆ ಕಟ್ಟಿ ಅವನನ್ನು ಮೆರೆಸಲು ಇಚ್ಛಿಸುತ್ತಾನೆ. ಇನ್ನು ಬೆಳೆಕೊಯ್ದು ರಾಶಿಯಾಗಬೇಕು. ರಾಶಿ ಮಾಡುತ್ತ ಮಾಡುತ್ತ ರೈತ, ಬಸವ ಎಲ್ಲರೂ ದಣಿದು ಹೋಗುತ್ತಾರೆ. ಏಕೆಂದರೆ ಅವನ ದುಡಿಮೆಯ ಸಮೃದ್ಧಿಯೇ ಅಷ್ಟು ಹಿರಿದಾಗಿದೆ–

ಸುಗ್ಗಿಯ ಕಣ ಕೇಳೊ ಸಗ್ಗವದು ರೈತನಿಗೆ।
ಹಿಗ್ಗು ಹಾಡುದಕೆ ಬೆಳವಲವು। ಮಲ್ಲಯ್ಯ
ಬುಗ್ಗೆ ಕುಣಿವುದಕೆ ಶಿವರೂಪ॥

ಹಂತಿ ತುಳಿಯುವ ರೈತನ ಸಂಭ್ರಮವನ್ನು ಕಂಡು ರಸಾನುಭವಿಯೊಬ್ಬ ಹೀಗೆ ಹಾಡಿದನೆಂದು ತೋರುತ್ತದೆ. ಬೆಳವಲ ನಾಡಿನ ಜೋಳದ ರಾಶಿಯು ಹಿಗ್ಗೇ ಅಂತಹದು! ಕುಂಬಾರ ಗುಂಡಯ್ಯ ಕೆಸರ ತುಳಿಯುತ್ತ ಭಕ್ತಿ ರಸಾವೇಶದಿಂದ ಶಿವನನ್ನು ಸ್ತುತಿಸುತ್ತ, ತೂಗಿ ತೊನೆದಂತೆ ಒಕ್ಕಲಿಗನೂ ಎತ್ತಿನ

ಹಿಂದೆ ಹಂತಿ ತುಳಿಯುತ್ತ ಮೈಮರೆದು ಸುಖಿಸುತ್ತಿದ್ದಾನೆ. ಶಿವಕೃಪೆಯ ಬುಗ್ಗೆಯೆ ಅಲ್ಲಿ ಹಿಂದಾಗಿ ನಿಂತಿದೆ. ತನ್ನ ಗೈಮೆಯ ಸಿರಿಯನ್ನು ತಾನೇ ಹೀಗೆ ತನ್ಮಯನಾಗಿ ಹಾಡಿ ಸವಿಯುವ ಭಾಗ್ಯ ನಮ್ಮ ನಾಡಿನಲ್ಲಿಂದು ಕಡಿಮೆಯಾದುದರಿಂದಲೇ ನಾವು ಅನ್ನಕ್ಕಾಗಿ ಪರರಿಗೆ ಕೈಯೊಡ್ಡುವ ದೈನ್ಯ ಸ್ಥಿತಿ ಪ್ರಾಪ್ತವಾಗಿರ ಬೇಕು. ಅಂಥ ಭಾಗ್ಯ ಅವರಿಗಿದ್ದುದರಿಂದಲೇ, ಅಂದಿನ ವ್ಯಾಪಾ ರಿಗಳು ಮುತ್ತು ರತ್ನಗಳನ್ನು ಬಳ್ಳದಿಂದ ಅಳೆದು ಮಾರಿರ ಬೇಕು. ಜನತೆ ದತ್ತಿ-ದಾನ-ಧರ್ಮಗಳಿಗೆ ತಮ್ಮ ಧನವನ್ನು ತೂರಿರಬೇಕು.

ಮುತ್ತಿನಂತಹ ಕಾಳಿನ ರಾಶಿ ಕಣದಲ್ಲಿ ಮೆರೆಯುತ್ತಿದೆ. ಹಂತಿಯನ್ನು ಹೊಡೆದ ಹಸುಮಗ. ಬಸವ ಮನೆಗೆ ಬಂದಿ ದ್ದಾರೆ. ಅವರ ಮೈಗೆಲ್ಲ ಸುಂಕ ತುಂಬಿದೆ. ಮನೆಯ ತಾಯಿಗೆ ಈ ಸುಂಕ ಹೊಲಸಾಗಿ ಕಾಣುತ್ತಿಲ್ಲ. ಕರ್ಮಯೋಗದಲ್ಲಿ ಮುಳುಗಿ ಧನ್ಯರಾಗಿ ಬಂದಿರುವ ಅವರ ಮೈಗೆ ಗಂಧದ ಹುಡಿಯೇ ಬಡಿದಿದೆ. ಎನ್ನುವ ಭಾವನೆ ಅವಳಲ್ಲಿ ತುಂಬಿ ತುಳು ಕುತ್ತಿದೆ. ಇಲ್ಲದಿದ್ದರೆ ಎದೆಯ ಮೇಲಿನ ಸೆರಗ ತೆಗೆದು ಆ ತಾಯಿ ಅದನ್ನು ಜಾಡಿಸಬಹುದೆ ?

> ಹಂತೀಯ ಹೊಡೆದೆತ್ತು ಹಂತೇಲಿ ಬಂದರೆ ।
> ಸುಂಕ ಜಾಡಿಸಿದೆ ಸೆರಗೀಲೆ । ಕಂದನಿಗೆ
> ಹಂತಿಯ ಎತ್ತು ಹದಿನೆಂಟು!

ಮಾತೆಯ ಮಮತೆಯ ಸೇವೆ ದುಡಿದ ಧಣಿಗಳಿಗೆ ! ಹಂತಿ

ತಿರುಗಿ ಬಂದ ಎತ್ತುಗಳು ಹದಿನೆಂಟಿದ್ದರೂ ಅವಳಿಗೆ ಮೈಯೊರೆಸಲು ದಣಿವೆಂಬುದೇ ಇಲ್ಲ. ಇನ್ನೂ ಎತ್ತು, ಸಿರಿ ಹೆಚ್ಚಾಗಲೆಂದೇ ಉಜ್ವಲ ಹರಕೆಯನ್ನು ತಾಯಿ ಕೊಡುತ್ತಾಳೆ ಕಂದನಿಗೆ.

ತಾನು ಮೊದಲೇ ನೇಮಿಸಿಕೊಂಡಂತೆ, ಸುಗ್ಗಿಯ ಕಣದಲ್ಲಿ ರೈತನು, ಎಲ್ಲರ ಪಾಲಿನ ಧಾನ್ಯವನ್ನು ಹಂಚುವನು. ಅಯ್ಯನವರಿಗೆ. ಆಯದವರಿಗೆ, ಗೋಸಾಳ ಬುಟ್ಟಿಯವರಿಗೆ ಎಲ್ಲರಿಗೂ ಪಾಲು ಮುಟ್ಟಲೇಬೇಕು. ಅವನ ಈ ದಾನ-ಧರ್ಮದ ನೀತಿಯನ್ನು ಯಾವ ಲಾಭದ, ಆಶೆಯೂ ಕೆಡಿಸಲಾರದು. "ಕೆರೆಯ ನೀರನು ಕೆರೆಗೆ ಚೆಲ್ಲಾಕ ಏನು?" ಎಂಬುದೇ ಅವನು ಭಗವಂತನ ಋಣದಿಂದ ಮುಕ್ತನಾಗಲು ಬಯಸುವ ಪರಿ, ದುಡಿಮೆಯಲ್ಲಿ ಇದೇ ಅವನ ಅಂತಿಮ ಗುರಿ. ಹಳ್ಳಿಗಳಲ್ಲಿಯ ಬಹುತೇಕ ಉದ್ಯೋಗದವರು ಇದೇ ಬಗೆಯ ಮನೋಧರ್ಮವನ್ನು ದುಡಿಮೆಯಲ್ಲಿ ತಾಳಿದವರು. ಕರ್ತಾರನ ಕಮ್ಮಟದಲ್ಲಿ ಇಂಥ ನಿಸ್ಪೃಹ ಭಾವದಿಂದ ಕೆಲಸ ಮಾಡಿ ಇಲ್ಲಿ ಸಲ್ಲುವವರಾಗಿ ಅಲ್ಲಿಗೂ ಸಂದಿದ್ದಾರೆ. 'ಕಾಯಕವೇ ಕೈಲಾಸ'ವೆಂಬ ಉಕ್ತಿಗೆ ಸೂಕ್ತವಾದ ವಿವರಣೆ ಹಳ್ಳಿಗರ ಶ್ರದ್ಧೆಯ ದುಡಿಮೆಯಲ್ಲಿ ಹೆಜ್ಜೆ ಹೆಜ್ಜೆಗೆ ಕಾಣಸಿಗುತ್ತದೆ.

ಹೀಗೆ ಕಾಯಕದಿಂದ ಧನಶಕ್ತಿಯನ್ನು. ನೀತಿ-ಪ್ರೀತಿ, ಗೌರವಗಳನ್ನು, ಕಡೆಗೆ ಸ್ವರ್ಗಪ್ರಾಪ್ತಿಯನ್ನು ಗಳಿಸಿಕೊಳ್ಳುವುದೇ ಜೀವನಧರ್ಮವಾದಾಗ ಅದು ಆದರ್ಶ ಜೀವನಧರ್ಮವಾಗಲಾರದೆ ?

# ೪. ದೈವಭಕ್ತಿ ಬಾಳಶಕ್ತಿ

ಚಿಕಿತ್ಸಕ ಬುದ್ಧಿಯ ಫಲವಾಗಿ ಜನಪದ ದೇವಶ್ರದ್ಧೆ ಮೂಡಿ ಬಂದಿರದೆ ಅವರ ಚಿತ್ತವೃತ್ತಿಯಿಂದ, ಭಾವಶುದ್ಧಿಯಿಂದ, ಋಣಭಾರದ ಭಾವದಿಂದ, ಮುಗ್ಧ ನಂಬಿಕೆಯಿಂದ ಅದು ಕೂಡಿಯೊಡೆದು ಬಂದಿದೆ; ಹಾಗೆಯೇ ಬೆಳೆದು ವಿಸ್ತಾರವಾಗಿ ಜೀವನದ ಅಂಗಾಂಗಳಲ್ಲಿ ತುಂಬಿಕೊಂಡಿದೆ. ಕಷ್ಟದಲ್ಲಿಷ್ಟೇ ದೇವರನ್ನು ಕರೆದು ಸುಖದಲ್ಲಿ ಅವನನ್ನು ಮರೆತವರಲ್ಲ ಅವರು. ವೇದ, ಶಾಸ್ತ್ರ, ಪುರಾಣಗಳು ದೇವರ ಸ್ವರೂಪವನ್ನು, ಭಕ್ತಿಯ ರೀತಿಯನ್ನು ಹೇಗೇ ವಿವರಿಸಿರಲಿ, ಅವೆಲ್ಲವುಗಳಲ್ಲಿಯ ತಿರುಳನ್ನೇ ಇವರು ಕಂಡು ಹಿಡಿದಿದ್ದಾರೆ ಎನ್ನಿಸುತ್ತದೆ. ಅವರ ದೇವಶ್ರದ್ಧೆಯ ಜೀವನದ ಪುಟಗಳನ್ನು ತಿರುವುತ್ತ ಹೋಗು ವಾಗ ದೇವರನ್ನು ಅವ್ಯಕ್ತನೆಂದು, ವ್ಯಕ್ತನೆಂದು ಕಂಡು ಹಾಡಿದ್ದಾರೆ, ಅನಂತರೂಪವಲ್ಲಿ ನೋಡಿದ್ದಾರೆ; ಮತ್ತೆ ಏಕೈಕ ರೂಪನೆಂದು ನಂಬಿ ನುಡಿದಿದ್ದಾರೆ. ಅಂಧಃಶ್ರದ್ಧೆ, ಮುಗ್ಧಶ್ರದ್ಧೆ, ಮಹಾಶ್ರದ್ಧೆಗಳಿಂದ ಪೂಜಿಸಿ ನಲಿದಿದ್ದಾರೆ. ಮತ-ಮತಗಳ ವಿಚಾರ ವಿಮರ್ಶೆಯನ್ನು ಮಾಡಿ, ಜಗಳವಾಡಿ ಧರ್ಮದ ಹಿರಿಮೆಯನ್ನು ಸ್ಥಾಪಿಸಲು, ತತ್ವ ಬೋಧನೆ ಮಾಡಲು ಅವರು ಹೊರಟವರಲ್ಲ. ದೇವರನ್ನು (ಯಾವ ದೇವರೇ ಆಗಿರಬಹುದು) ನೆನೆಯುತ್ತ ಎದ್ದು, ಭಕ್ತಿ, ಶ್ರದ್ಧೆಗಳಿಂದಲೇ ಜೀವನ ಸಾಗಿಸಿ, ಭಗವಂತನನ್ನು ಸ್ಮರಿಸುತ್ತಲೇ ಶಾಂತಿಯಿಂದ ಇಹಲೋಕದ ಯಾತ್ರೆ

ಯನ್ನು ಮುಗಿಸಿ ಕೃತಕೃತ್ಯರಾದವರು.

ಎದ್ದೊಡನೆ ನಿಮ ಗ್ಯಾನ ಏಳುತಲೆ ನಿಮ ಗ್ಯಾನ |
ಶಿದ್ಧರ ಗ್ಯಾನ ಶಿವಗ್ಯಾನ! ಮಾಶಿವನೆ |
ನಿದ್ದೆಗಣ್ಣಾಗ ನಿಮ ಗ್ಯಾನ ||

ಕತ್ತಲೆಯ ರಾತ್ರಿ ಕಳೆದು ಅವರ ದಿನ ಪ್ರಾರಂಭವಾಗುವುದೇ ಶಿವಧ್ಯಾನದಿಂದ. ನಿದ್ದೆಗಣ್ಣಿನಲ್ಲಿಯೂ ಅವನದೇ ಧ್ಯಾನ ಏತಕ್ಕಾಗಿ? ಕಡೆಗೀಲಿಲ್ಲದ ಬಂಡಿ ಹೊಡೆಗೆಡೆವುದೆಂಬ ಅರಿವು ಅವರಿಗಿದೆ. ಶಿವನಾಮ ಸ್ಮರಣೆ ಸಂಸಾರದ ಬಂಡಿಗೆ ಕಡೆಗೀಲಾಗಿ ನಿಂತು ಬಂಡಿಯನ್ನು ಬೀಳಗೊಡುವುದಿಲ್ಲ. ಇಷ್ಟೇ ಅಲ್ಲದೆ ದೇವನಾಮ ಸ್ಮರಣೆ ಬಾಳಬಂಡಿಯನ್ನು ಸರಾಗವಾಗಿ ಶಿವಪಥದಲ್ಲಿ ಸಾಗಿಸುತ್ತದೆ. ಜೀವನದಲ್ಲಿ ಆಗಾಗ ಅನುಭವಿಸುವ ಮಹಾತ್ಮರ ವಾಣಿಯ ಪ್ರಭಾವ ಅವರ ಧರ್ಮಪ್ರಜ್ಞೆಯನ್ನು ಜಾಗ್ರತಗೊಳಿಸಿ, ದೃಷ್ಟಿಶುದ್ಧಿ, ಭಾವ ಶುದ್ಧಿಯನ್ನುಂಟುಮಾಡಿ ದೇವನೊಬ್ಬ ನಾಮ ಹಲವು ಎಂಬ ಬೆಳಕನ್ನು ಬೀರುತ್ತಿರುತ್ತದೆ. ಆದರೂ ಜೀವನದಲ್ಲಿ ರೋಗ-ರುಜಿನ, ಬೆಳೆ ನಾಶ, ಗಂಡಾಂತರಗಳು ಬಂದಾಗ ಭೀತಿಗೊಂಡ ಮುಗ್ಧ ಮನಸ್ಸು ಹಲವಾರು ಬಗೆಯ ದೇವರಿಗೆ ಹರಕೆ ಹೊರುವುದು. ಬೇನೆ-ಬೇಸರಿಕೆಯ ಪ್ರಸಂಗಗಳಲ್ಲಿ ಶಕ್ತಿಮಾತೆ ಶಂಕರಿಯನ್ನೆ ಭಯಂಕರಿಯಂತೆ ಕಂಡು ಸಹಜ, ಅಸಹಜ ಎರಡೂ ಮಾರ್ಗಗಳಿಂದ ಅಸಹಾಯಕರಾಗಿ ಅವರು ಪೂಜಿಸಿದ್ದಾರೆ. ಭಾವಶುದ್ಧಗೊಂಡು ಭಕ್ತಿಯಾಗಿ ಹರಿದು ಬಂದಾಗ ಪರಾತ್ಪರ ಶಕ್ತಿಯ ಸಹಜ ರೂಪವನ್ನು ಹಲವಾರು ತೆರನಾಗಿ ಕಂಡಿದ್ದಾರೆ. ಎಳ್ಳು ಜೀರಿಗೆ ಬೆಳೆ

ಯುವ ಭೂಮಿ, ಬೇಸಾಯದ ಉಪಕರಣಗಳು ಅವರಿಗೆ
ಪೂಜ್ಯ ವಸ್ತುಗಳಾಗಿ ಪರಿಣಮಿಸುತ್ತವೆ. ಪ್ರಾದೇಶಿಕ ಭೇದ
ದಿಂದ ಗಿರಿಯ ಮಲ್ಲಯ್ಯ, ಸೊನ್ನಲಾಪುರದ ಸಿದ್ಧರಾಮ. ಬಿಳಿ
ಗಿರಿರಂಗ, ತಿರುಪತಿಯ ತಿಮ್ಮಪ್ಪ, ಬೆಟ್ಟದ ಚಾಮುಂಡಿ,
ಮಲೆಯ ಮಾದೇಶ್ವರ, ಕಲ್ಯಾಣ ಬಸವಣ್ಣ, ಕೊಳ್ಳದ ಎಲ್ಲಮ್ಮ
ಈ ಬಗೆಯ ದೇವವೈವಿಧ್ಯ ರೂಪಗೊಂಡು ನಿಲ್ಲುವುದು. ಈ
ವೈವಿಧ್ಯದಲ್ಲಿಯೂ ಮಣಿಸರದಲ್ಲಿಯ ಸೂತ್ರದಂತೆ ಅವರ ಏಕೇ
ಶ್ವರ ನಿಷ್ಠೆಯೂ ಹರಿದುಕೊಂಡು ಬರುತ್ತದೆ. ದೇವನಾಮ
ವನ್ನವರು ನಾಲಗೆಯ ಮೇಲೆಯೇ ಬಿತ್ತಿಕೊಂಡು ಬಿಟ್ಟವರು.
ಅಲ್ಲಿಂದ ದೇವಪೂಜೆ ಪ್ರಾರಂಭವಾಗುತ್ತದೆ. ಗುಡ್ಡದ ಎಲ್ಲಮ್ಮ
ತಾಯಿಯನ್ನು ಸುಪ್ರಭಾತ ಹೇಳಿಯೇ ಗರತಿಯೊಬ್ಬಳು ಎಬ್ಬಿ
ಸುತ್ತಿದ್ದಾಳೆ.

ಏಳ ಎಲ್ಲವ್ವ ತಾಯಿ ಎಷ್ಟೊತ್ತು ಮಲಗೀದಿ।
ಹೂವೆಂಜಲಾಗಿ ಹುಳಮುಟ್ಟಿ। ಕೊಳ್ಳದ।
ನೀರೆಂಜಲಾಗಿ ಗಿಳಿಕುಡಿದು ॥

ಎಲ್ಲವ್ವ ತಾಯಿಗೆ ಅರ್ಪಿಸುವ ಪ್ರತಿವಸ್ತುವೂ ಮೀಸಲವಾಗಿರ
ಬೇಕೆಂಬುದು ಭಕ್ತಳ ಬಯಕೆ. ಮುಂಜಾವ್ರದೋರಿ ಸೂರ್ಯ
ಕಾಣಿಸಿಕೊಳ್ಳಲು, ಅರಳುತ್ತಿರುವ ಹೂಗಳನ್ನು ಭ್ರಮರಗಳು
ಮುಟ್ಟಿ ಎಂಜಲುಗೊಳಿಸುವವು; ಗಿಳಿಗಳು ಮೈಮುರಿದೆದ್ದು
ಬಂದು ಕೊಳ್ಳದ ನೀರನ್ನು ಕುಡಿದುಬಿಟ್ಟರೆ ತಾಯಿಯ ಪೂಜೆಗೆ
ನೀರು ಎಂಜಲವಾಗುವುದು. ತಾಯಿ ಇನ್ನೂ ಮಲಗಿಯೇ
ಇದ್ದಾಳೆ! ಹೇಗೆ ಮಾಡುವುದು ಎಂಬ ಉಭಯ ಸಂಕಟಕ್ಕೆ
ಭಕ್ತಳು ಸಿಕ್ಕಿಬಿದ್ದಿದ್ದಾಳೆ. ಕೊನೆಯಲ್ಲಿ ಎಲ್ಲವ್ವ ತಾಯಿಯನ್ನು

ರಾಷ್ಟ್ರೀವಾದರೂ, ಎಬ್ಬಿಸಿಬಿಡಬೇಕೆಂದು ಧೈರ್ಯ ತಂದು
ಕೊಂಡು 'ಏಳ ಎಲ್ಲವ್ವ ತಾಯಿ' ಎಂದು ಎಬ್ಬಿಸುವ ಅಪರಾಧ
ವನ್ನು ಮಾಡಿಯೇ ಬಿಡುವಳು. ಇಲ್ಲಿಯ ಭಕ್ತಳ ಮನೋ
ಭಾವ, ಬಸವಣ್ಣನವರು ಸಂಗಮನಾಥನನ್ನು 'ಅಳಿಯೆರಗದ,
ಅನಿಲನಲುಗದ, ರವಿಕರಂ ಪುಗದ....' ಮೀಸಲು ಹೊಗ್ಗೆಯಿಂದ
ಪೂಜಿಸುವ ನಿರ್ಮಲ ಮನೋಭಾವಕ್ಕೆ ಸರಿದೊರೆಯಾಗಿ ನಿಲ್ಲು
ತ್ತದೆ *

ಭಕ್ತಿಗೆ ಮೀಸಲು ವಸ್ತುಗಳಷ್ಟೇ ಮುಖ್ಯವಾದದ್ದು
ಮೀಸಲು ಭಾವ

ಮನವ ಮಲ್ಲಿಗಿ ಮಾಡಿ ತನುವ ಕಾದಗಿ ಮಾಡಿ ।
ನನ್ನೈದು ಬೆರಳ ಸಮಮಾಡಿ। ನೀಡೇನ ।
ನನ್ನ ಸಲಹಂಥ ಗುರುವೀಗೆ ॥

ಈ ಮೀಸಲು ಭಾವದಿಂದ ಮಹಾ ಸಾಧಕರೂ, ಮಹಾತ್ಮರೂ
ಮುಟ್ಟಿ ನಿಲ್ಲುವ ಅಧ್ಯಾತ್ಮದ ಮುಟ್ಟನ್ನವರು ತಮ್ಮ ಸಂಸಾ
ರದ ಮಧ್ಯದಲ್ಲಿದ್ದುಕೊಂಡೇ ಮುಟ್ಟಲು ಪ್ರಯತ್ನಿಸಿ ಬಹು
ಪಾಲು ಯಶಸ್ಸನ್ನು ಗಳಿಸಿದ್ದಾರೆ. ದಿನನಿತ್ಯದ ಕೆಲಸದಲ್ಲವರು
ವರೆಮೋಸಗಳನ್ನು ಅರಿಯರು; ದಾನ ಮಾಡುವುದು, ದತ್ತಿ
ಬಿಡುವುದು. ಜಾತ್ರೆ, ದಾಸೋಹ ಸಾಗಿಸಿಕೊಂಡು ಬರುವುದು,
ಪುರಾಣ ಪುಣ್ಯ ಕಥೆಗಳನ್ನು ಕೇಳುವುದು, ದೇವರ ಹಲವಾರು

* ಶ್ರೀ ಚೆನ್ನವೀರ ಕಣವಿ 'ಜನಪದ ಕಾವ್ಯದಲ್ಲಿ ಪ್ರತಿಮಾ ವಿಧಾನ'
ಕರ್ನಾಟಕ ಭಾರತಿ, ಸಂಪುಟ ೧ ಸಂಚಿಕೆ ೧

ಲೀಲೆಗಳನ್ನು ಬಯಲಾಟ, ನಾಟ್ಯಗಳ ಮೂಲಕ ತೋರಿಸು ವುದು ಇಂಥ ಬಗೆಬಗೆಯ ಕಾರ್ಯಗಳಲ್ಲಿ ಜನತೆಯ ಪರಿಶುದ್ಧ ಧರ್ಮಭಾವ ಮೆರೆಯುತ್ತಿರುವುದನ್ನು ಕಾಣಬಹುದಾಗಿದೆ. ಅವರ ಅನೇಕ ದೇವತಾ ಸ್ತುತಿಗಳಲ್ಲಿ 'ಸರ್ವೇ ಜನಾಃ ಸುಖಿ ನೋಭವಂತು' ಎಂಬ ಸರ್ವಲೋಕ ಹಿತಾಸಕ್ತಿ ಮಾರ್ದನಿಯು ತ್ತಿರುವುದನ್ನು ಕೇಳಬಹುದು.

ಗಿರಿಜೆಯ ಕೇಳೋಕೆ ಗಿರಿಯಿಂದ ಮಲ್ಲಯ್ಯ ಬಂದ।
ಗಿರಿಯುದ್ದ ಹೊನ್ನ ಅಳಕೊಂಡು । ಬಂದವ್ರ।
ಗಿರಿ ದೂರ ಎಂದು ಗಿರಿಜೆಯ ಕೊಡರಂತೆ ॥

ಇಲ್ಲಿಯ ಕಲ್ಪನೆ ಎಷ್ಟು ಸಹಜ ಸುಂದರವಾಗಿದೆ! ಜೀವನ ಲ್ಲಿಯ ತಮ್ಮ ದೃಷ್ಟಿ, ಆಕಾಂಕ್ಷೆಗಳನ್ನು ದೇವರಿಗೂ ಆರೋಪಿಸಿ ಅವೂ ಆತನ ಪ್ರವೃತ್ತಿಗಳಾಗಿರಬಹುದೆಂದು ಮುಗ್ಧವಾಗಿ ಕಲ್ಪಿ ಸಿಕೊಂಡು ಹಾಡಿರುವುದು ಸೊಗಸಾಗಿದೆ. ಇಲ್ಲಿಯ ಪ್ರಸಂ ಗಿರಿಮಲ್ಲಯ್ಯ ಗಿರಿಜೆಯನ್ನು ಬೇಡಿ ಬಂದುದು. ಗಿರಿಜೆಯ ಸ್ವರೂಪವನ್ನು, ಚಿತ್ತಶುದ್ಧಿಯನ್ನು ಕಂಡ ಶಿವನು ಅ ಳನ್ನು ಪಡೆಯುವದಕ್ಕೆ ಗಿರಿ ಎತ್ತರದ ಹೊನ್ನ ರಾಶಿಯನ್ ಸುರಿಯಲು ಸಿದ್ಧನಾಗಿದ್ದಾನೆ. ಆದರೆ ಹಿಮವಂತನ ಗಿರಿಯೆಲ್ಲಿ ಪರ್ವತ ಮಲ್ಲಯ್ಯನ ಶ್ರೀಶೈಲವೆಲ್ಲಿ? ಊರು ಬಹಳ ದೂ ವೆಂದು ತಿಳಿದಾಗ ತಂದೆತಾಯಿಗಳು ಮಗಳನ್ನು ಕೊಡ ಅನುಮಾನಿಸುವಂತೆ ಇಲ್ಲಿಯೂ ಗಿರಿಜೆಯ ತಂದೆತಾಯಂದಿ ಆತಂಕಪಟ್ಟಿದ್ದಾರೆ. ಅಳಿಯನ ಊರು ದೂರವಾದರೆ ಮಗ

ನೋರೆ ಆಗಾಗ ನೋಡುವುದು ಸಾಧ್ಯವಾಗದು. ಮ ಗೆ ಳ ಮೇಲಿನ ವ್ಯಾಮೋಹ ಯಾರನ್ನು ಕಾಡಿಸದು ?

ಇದರಂತೆಯೆ ಗಂಗೆ-ಗೌರಿಯರ ಜಗಳದಲ್ಲಿ, ಸತ್ಯಭಾಮೆ ರುಕ್ಮಿಣಿಯರ ಮುನಿಸಿನಲ್ಲಿ ಸವತಿಯರ ಸಹಜ ದೌರ್ಬಲ್ಯದ ಸೊಗಸನ್ನು ಕಂಡು ಆನಂದಿಸಿದ್ದರೆ, ಹನುಮಂತ, ವೀರಭದ್ರ ಮೊದಲಾದ ದೇವರಲ್ಲಿಯ ಹಾಸ್ಯ, ಕೋಪಗಳನ್ನು ತನ್ಮಯ ರಾಗಿ ಹಾಡಿ ಸುಖಿಸಿದ್ದಾರೆ. ಸರಸವಾಡುತ್ತ ಹಾಡುತ್ತ ಭಗ ವಂತನ ಭವ್ಯ ರೂಪವನ್ನವರು ದರ್ಶಿಸುತ್ತಾರೆ. ಗಿರಿಜೆ-ಶಿವರ ಮದುವೆಯ ವಿಜೃಂಭಣೆ ಮಾನವ ಲೋಕದ್ದಲ್ಲ. ಅಲ್ಲಿ ಮದು ವೆಗೆಂದು ಹಾಲಕೊಳ, ತುಪ್ಪದ ಕೆರೆಗಳೇ ಏರ್ಪಟ್ಟಿವೆ. ಖಂಡಗ ಗಟ್ಟಲೆ ಹೂವಿನ ಹಾರಗಳ ರಾಶಿ ಮನವನ್ನು ಸೋಜಿಗಗೊಳಿ ಸುತ್ತದೆ. ಕವಿತೆ ಈಗ ದೇವತ್ವದ ಮಹದ್ಗುಣವನ್ನು ಹೃದಯ ತುಂಬಿ ನಿರೂಪಿಸುವುದು. ನೆರೆಯಲ್ಲಿ ಕಂಡ ಶಿವ ಬ್ರಹ್ಮಾಂಡ ದೊಡೆಯನೆಂಬ ಎಚ್ಚರ ಹುಚ್ಚು ಹಿಡಿಸುತ್ತದೆ. ಎಚ್ಚರದಲ್ಲಿ ಕಂಡ ಶಿವನು ಕನಸಿನಲ್ಲಿಯೂ ಕಾಣುತ್ತ ಅಖಂಡ ಸುಖವನ್ನು ಕೊಡತೊಡಗುವನು.

ನಿದ್ದೆಗಣ್ಣಲಿ ಕಂಡೆ ಸುದ್ದ ಗುರುವಿನ ಪಾದ।<br>
ಎದ್ದ ನೋಡಿದರ ನಿರಬಯಲ। ಗುರುರಾಯ<br>
ರುದ್ದರನ ಮಹಿಮೆ ತಿಳಿಯದ ॥

ಶಿವನನ್ನು ಆತ್ಮೀಯತೆಯಿಂದ ಕಂಡರೂ ಅವನ ಮಹಿಮೆ ತಿಳಿ

ಯದೆಂದು ಭಕ್ತನು ಬೆರಗಾಗಿ ನಿಲ್ಲುವನು. ಶಿವನೊಡನಾಟದ ಈ ನೆಳಲು-ಬೆಳಕಿನ ಪರಿ. ನಚ್ಚು, ಪೆಚ್ಚು ಎರಡನ್ನೂ ಉಂಟು ಮಾಡುತ್ತವಾದರೂ ಅವರಲ್ಲಿಯ ನಂಬುಗೆ ಕಡಿಮೆಯಾಗುವು ದಿಲ್ಲ. ಪರಮಾತ್ಮನ ಕೋಮಲ ಗುಣಕ್ಕೆ ಕಠಿಣತೆಗಳು ಬಂದೆರ ಗಿದರೆ ಅವರ ಮನಸ್ಸೂ ಪರಿತಪಿಸುತ್ತದೆ. ರುದ್ರರಸ ಮಹಿಮೆ ಅಗಾಧವಾದುದೆಂದು ಅವರೇ ಹಾಡಿದ್ದರೂ ಅವನಿಗೆ ನೋವಾ ಗುತ್ತದೆ ಎಂದು ತಾವೇ ಸರಳುತ್ತಾರೆ.

ಕೂಡಲ ಸಂಗಯ್ಯ ಹೊಳಿಯಾಗ ಹ್ಯಾಗಿದ್ದಿ ।
ಹಳ್ಳೊತ್ತಿ ಸಣ್ಣ ಮಳಲೊತ್ತಿ । ಗಂಗೀಯ ।
ನೀರೊತ್ತಿ ಲಿಂಗ ನೆನೆದಾವ ॥

ಕೋಮಲಗಾತ್ರನಾದ ಪರಮಾತ್ಮನಿಗೆ ಹೊಳೆಯಲ್ಲಿಯ ಹರಳು. ಮಳಲು, ನೀರಿನ ರಭಸ ತುಂಬ ನೋವನ್ನುಂಟು ಮಾಡಿರ ಬೇಕೆಂದು ಭಾವಿಸಿದ ಮೃದು ಹೃದಯದ ಭಕ್ತ ತಾನೂ ಅಳ ಲುತ್ತಾನೆ. ಅವರಿಗೆ ದೇವರು ಬರಿಯ ಕಲ್ಲಲ್ಲ. ತಮ್ಮಂತೆಯೇ ಸುಖ, ದುಃಖಗಳಿಗೆ ಒಳಗಾಗುವನು ಎಂಬ ಕಲ್ಪನೆ ಇದೆ. ಕೋಳೂರ ಕೊಡಗೂಸು ಭಗವಂತನಿಗೆ ಹಸಿವೆ ನೀಗಲು ಹಾಲು ಕುಡಿಸಲಿಲ್ಲವೆ ? ಇದೇ ತೆರನಾದ ಮುಗ್ಧ ಭಕ್ತಿಯ ಸಂವೇದನಾಶೀಲ ಗುಣವನ್ನು ಜನಪದ ಕಾವ್ಯದಲ್ಲಿಯ ಕಣ್ಣ ಪ್ಪನ ಹಾಡಿನಲ್ಲಿ, ಕುಂಬಾರ ಗುಂಡಯ್ಯನ ಪದ್ಯದಲ್ಲಿ, ಕಲ್ಯಾಣ ಬಸವಯ್ಯನ ಗೀತದಲ್ಲಿ ಮತ್ತು ಇಂಥವೇ ಶರಣ, ಸಂತರ

ಹಾಡುಗಳಲ್ಲಿ ವಿಪುಲವಾಗಿ ಕಾಣಬಹುವಾಗಿವೆ. ಹೀಗೆ ಜನಪದ ಭಕ್ತಿ ಮರ-ಕಲ್ಲುಗಳನ್ನು ಮೊದಲು ಮಾಡಿಕೊಂಡು ನೆಲ-ನೀರುಗಳನ್ನು ಹೀರಿಕೊಂಡು, ಜನ-ದನಗಳನ್ನು ಸುತ್ತಿಕೊಂಡು ವನ-ಗಿರಿಗಳನ್ನು ಏರಿ, ಗಾಳಿ-ಬೆಳಕುಗಳಲ್ಲಿ ತೂರಿಕೊಂಡು ಜೀವಾತ್ಮ ಪರಮಾತ್ಮಗಳನ್ನು ಬೆಸೆದು ನಿಲ್ಲಿಸುತ್ತದೆ. ತಮ್ಮ ದುಡಿತ, ನಡೆ, ನುಡಿ. ದರ್ಶನಗಳಲ್ಲವರು ಧರ್ಮವನ್ನೇ ನಡೆದವರಾದುದರಿಂದ ಧರ್ಮವನ್ನು ಕುರಿತು ಹೇಳುವುದು ಅವರಿಗೆ ಗೌಣವಾದುದು. ಜೀವನದ ಯಾವ ಭಾಗವೂ ಅವರಿಗೆ ಶಿವ ರಹಿತವಾಗಿ ಕಂಡುದಿಲ್ಲ. ಆದುದರಿಂದ ಅವರ ಹಾಡುಗಳಲ್ಲೆಲ್ಲ ಭಕ್ತಿ, ಧರ್ಮದ ಯುಮಳ ಶಕ್ತಿಯ ಮಧುರ ಸಮ್ಮೇಳನದ ಧ್ವನಿ ಮಿಡಿಯುತ್ತಿದೆ.

ಶರಣು ಶರಣೆಂಬುವೆವು ಹರಣ ಹಾರುವ ತನಕ ।
ಕರುಣಿಸಿರಿ ಶರಣ ಬಸವಯ್ಯ ನಮಗಿನ್ನು ।
ಹರಸಿರಿ ಹುಲಿಸು ಹುಲ್ಲಲ್ಲಿಗೊ ॥

ಪ್ರಾಣ ಹಾರುವ ವರೆಗೆ ಶಿವನಿಗೆ ಶರಣು ಶರಣೆಂದರೂ ಅವರಿಗೆ ತೃಪ್ತಿಯಿಲ್ಲ. ಅವರಿಗೆ "ಆಡಿ ಕಾಲು ದಣಿಯವು; ನೋಡಿ ಕಣ್ಣು ದಣಿಯವು; ಹಾಡಿ ನಾಲಿಗೆ ದಣಿಯದು." ರಾಸಿಗೆ ಹುಲುಸುಗೂಡುವಂತೆ ನಾಲಗೆಗೂ ದೇವಗೀತೆ ಹಾಡುವ ಹುಲುಸು ದೊರೆಯಲಿ ಎಂದು ಮತ್ತೆ ಮತ್ತೆ ಪ್ರಾರ್ಥಿಸುತ್ತಾರೆ.

———

# ೫. ಜೀವನ ಮೌಲ್ಯ ಪ್ರಸಾರ

ನಿಸರ್ಗದ ಮಡಿಲಲ್ಲಿ ದುಡಿಯುವ ಜನ, ಸಾಮಾಜಿಕ ಜೀವನ ರಂಗದಲ್ಲಿ ಆಳವೂ, ವಿಸ್ತಾರವೂ ಆದ ಜನಸಂಪರ್ಕವನ್ನು ಹೊಂದುವರು. ಬಾಳುವೆ ಸಂಕೀರ್ಣವಾಗಿರುವಷ್ಟೇ ಮಾನವನ ಅಂತರಂಗವೂ ಸಮಸ್ಯಾತ್ಮಕವಾಗಿರುತ್ತದೆ. ಬಗೆಬಗೆಯ ಜನ ವಿವಿಧ ಮನೋಭಾವನೆಗಳಿಂದ ಉದ್ದೀಪನಗೊಂಡು ಒಟ್ಟು ಬಾಳಿನ ಉತ್ಕರ್ಷ, ಅಪಕರ್ಷಗಳಿಗೆ ಕಾರಣೀಭೂತರಾಗು ವರು. ತುಸು ತಾಳ್ಮೆಯ ಗುಣದಿಂದ ಹೊಂದಿಸಿಕೊಳ್ಳಬಹು ದಾದ ವ್ಯಕ್ತಿದೋಷಗಳಿಗೆ ಮನುಷ್ಯ ಹೆದರಬೇಕಾದುದಿಲ್ಲ. ಆದರೆ ಕೆಲವೊಂದು ಸಲ ಧನದ ಮದ, ಅಧಿಕಾರ ಮದ, ಯೌವನ ಮದ, ಸ್ವಾರ್ಥಲೋಲುಪತೆ, ಅಕಾರಣವೈರ, ಜನತೆ ಯನ್ನು ತನ್ನ ಮುಷ್ಟಿಯಲ್ಲಿ ಹಿಡಿದಿಟ್ಟುಕೊಳ್ಳಬೇಕೆಂಬ ಅಹಂ ಕಾರ ಇಂತೀ ಹಲವಾರು ದೈತ್ಯಗುಣಗಳು ದಳ್ಳುರಿಯಂತೆ ಹರಡಿ ಬಾಳ್ವೆಯ ಸೊಗಸನ್ನು, ಜೀವನದ ಹಿರಿಮೆಯನ್ನು ಕರಕುಮಾಡಿಬಿಡುವವು. ಇಂಥ ವಿಷಗಳಿಗೆಗಳು ಜೀವನದು ದ್ದಕ್ಕೂ ಕಾದೇ ಇರುತ್ತವೆ. ಆಗ ಬಾಳುವೆಯ ಪ್ರಥಮ ಘಟಕ ವಾದ ಗಂಡು-ಹೆಣ್ಣು ಮದಹರರಾಗಿ ನಿಂತು ಬಾಳನ್ತಿದ್ದಲು ಹೇಗೆ ಹೆಣಗಾಡಿದ್ದಾರೆ ಎನ್ನುವುದರ ಅವಲೋಕ ನೆಯೂ ಹೃದಯಂಗಮವಾದುದು. ಅವರ ಹೆಣಗಾಟದಲ್ಲಿ

ವ್ಯಕ್ತಿ ನೀತಿ, ಕೌಟುಂಬಿಕ ನೀತಿ, ಸಮಾಜ ನೀತಿಗಳು ಜೀವನದ ಮೌಲ್ಯಗಳಾಗಿ ಪರಿಣಮಿಸಿ ಜನತೆಯ ಬಾಳಿನ ಧರ್ಮವನ್ನು ಬಿತ್ತರಿಸತೊಡಗುತ್ತವೆ. ಹಿಂದೆ ಈಗಾಗಲೇ ಜೀವನ ನಿಷ್ಠೆ, ಮಡಿಮೆಯ ಶ್ರದ್ಧೆಗಳನ್ನು ವಿವರಿಸುವಾಗ ಅವರ ಜೀವನ ಮೌಲ್ಯಗಳ ಕೆಲಮಟ್ಟಿನ ಉಲ್ಲೇಖ ಕಂಡುಬಂದಿದ್ದರೂ, ಸಾಮಾಜಿಕ ಜೀವನದಲ್ಲಿ ಈ ಮೌಲ್ಯಗಳು ಹೆಚ್ಚು ಪುಷ್ಟಿಗೊಳ್ಳುವುದರಿಂದ ಇಂಥ ಕ್ರಮದಲ್ಲಿಯೂ ವಿವರಿಸುವುದು ಸಾಧುವೆಂದು ನನ್ನ ಭಾವನೆ.

ಆಚಾರಕ್ಕರಸಾಗು ನೀತಿಗೆ ಪ್ರಭುವಾಗು ।
ಮಾತಿನಲಿ ಚೂಡಾಮಣಿಯಾಗು। ಕಂದಯ್ಯ
ಜ್ಯೋತಿಯೇ ಆಗು ಜಗಕೆಲ್ಲ ॥

ಪ್ರಾಯಶಃ ಜೀವನ ರಂಗದಲ್ಲಿ ಇದೀಗ ಪ್ರವೇಶಿಸುತ್ತಿರುವ ಮಗುವನ್ನು ಕುರಿತು ತಾಯಿ ಹೀಗೆ ಹೇಳಿರಬಹುದು ಅಥವಾ ತೊಟ್ಟಿಲಲ್ಲಿಯ ಮಗುವನ್ನು ತೂಗುತ್ತ ಅದು ಮುಂದೆ ಹೀಗಾಗಲಿ ಎಂಬ ಭಾವನೆಯಿಂದ ಪ್ರೇರಣೆಗೊಂಡು ತಾಯಿ ಹೀಗೆ ಲಾಲಿ ಹಾಡಿರಬಹುದು. ಮಗುವಿನ ಮುಗ್ಧವೂ, ಪರಿಶುಭ್ರವೂ ಆದ ಎದೆಯಾಳದಲ್ಲಿ ಗರತಿ ಈ ನೀತಿಯ ನುಡಿಗಳನ್ನು ಮೂಡಿಸುತ್ತಿದ್ದಾಳೆ. ಇವಳು ಹೇಳುವ ಆಚಾರ, ನೀತಿ, ಮಾತು, ಜ್ಯೋತಿ ಇವುಗಳ ಗರ್ಭದಲ್ಲಡಗಿರುವ ಅರ್ಥದ ಹಿರಿಮೆ ಏನು? ಹಂತ ಹಂತವಾಗಿ ವಿಕಾಸಗೊಳ್ಳಬಹುದಾದ ಹೃದಯದ ಸಿರಿ ಇಲ್ಲಿ ಮೂರ್ತೀಭವಿಸಿ, ಮಾತು ಲೋಕೋತ್ತರ

ನೀತಿಯಾಗುವುದನ್ನು ಕಂಡಾಗ 'ಕನ್ನಡದ ವೇದಗಳು ಜಾನ ಪದ ಗೀತಗಳು' ಎಂದು ಹಾಡಿದ ಡಾ ಶಿವರುದ್ರಪ್ಪನವರ ಧ್ವನಿಯಲ್ಲಿ ದನಿಗೂಡಿಸಬೇಕಾಗುತ್ತದೆ ಒಳ್ಳೆಯ ನಡೆ, ನೀತಿ ಮುಖ್ಯವಾಗಿರುವಂತೆ ನಮಗೆ ಮಾತೂ ಮುಖ್ಯ ಎಂಬ ಸತ್ಯವನ್ನು ಹೆಣ್ಣಿನ ಕಣ್ಣು ಗುರುತಿಸಿಕೊಂಡಿದೆ. ಮಾತು 'ಅಯ್ಯಾ' ಎಂದಾಗಿ ಸ್ವರ್ಗ ನಿರ್ಮಿಸಬಹುದು; 'ಎಲವೋ' ಎಂದು ಹೊರಟು ನರಕ ಸೃಷ್ಟಿಸಬಹುದು. 'ಮಾತಿನಿಂ ನಗೆ ನುತಿ; ಮಾತಿನಿಂದ ಹಗೆ, ಹತಿ', ಎಂದು ಹೇಳಿದ ಸರ್ವಜ್ಞನ ವಾಣಿಯೂ ದಿಟ. ಶರಣರು 'ಮಾತು ಜ್ಯೋತಿರ್ಲಿಂಗ' ವೆಂದು ಹೇಳಿದರು. ಅದಕ್ಕಾಗಿ ಮಗು ಮಾತಿನ ಮರ್ಮವನ್ನು ರಿತುಕೊಂಡು ಚೂಡಾಮಣಿಯಾಗಬೇಕೆಂದು ತಾಯಿ ಹಾರೈ ಸುತ್ತಾಳೆ. ಇಂಥವನು ಜಗಕೆ ಜ್ಯೋತಿಯೂ ಆಗಬಲ್ಲ.

ಹಿರಿಯರಿಗೆ ಹಿರಿಯನ್ನು ಕಿರಿಯರಿಗೆ ಕಿರಿಯನ್ನು ।
ನೆರೆಗಡ್ಡದ ಮುದುಕರ । ಕಂಡರ
ತಲೆಬಾಗಿ ನಡೆಯೊ ನನ ಮನವೆ ॥

ಮಗುವಿಗೆ ನೀತಿ ಕಲಿಸುವ ತಾಯಿ ತನ್ನ ಮನವನ್ನು ಮೊದಲು ನೀತಿಯ ಅಂಕೆಗೆ ತರುತ್ತಾಳೆ. ಹಿರಿಯರನ್ನು ಆದರದಿಂದ, ಕಿರಿಯರನ್ನು ವಾತ್ಸಲ್ಯದಿಂದ, ನೆರೆಗಡ್ಡದ ಮುದುಕರನ್ನು ತಲೆಬಾಗಿ ಗೌರವದಿಂದ ಕಾಣುವದು ಉತ್ತಮ ನೀತಿ. ವಿನಮ್ರತೆ ಮಾನವನಿಗೆ ಬೆಳೆಯುವ ಶಕ್ತಿಯನ್ನು

ತಂದುಕೊಡುವುದು ಅದಕ್ಕಾಗಿಯೆ ಅದು ವ್ಯಕ್ತಿಗೆ ಭೂಷಣ ಪ್ರಾಯವೆಂಬುದು ಗರತಿಯ ಮತ.

ಬಂಗಾರ ಬಳಿಯಿಟ್ಟು ಬೈಬ್ಯಾಡ ಬಡವರನ ।
ಬಂಗಾರ ನಿನಗ ಸ್ಥಿರವಲ್ಲ। ಮಧ್ಯಣದ
ಹೊತ್ತು ಹೊರಳೂದು ತಡವಲ್ಲ ॥

ಧನದ ಮದ ಸರಿಯಲ್ಲ; ಆ ಮದದಲ್ಲಿ ಬಡವರನ್ನು ದೂಷಿಸ ಬಾರದು; ಏಕೆಂದರೆ ಸಿರಿ ಶಾಶ್ವತವಲ್ಲ. ಈ ಮಾತಿನಲ್ಲಿಯ ನೀತಿಯ ಸತ್ಯವನ್ನು ಮನದಟ್ಟು ಮಾಡಿಕೊಡಲು ಗರತಿ ಉಪ ಯೋಗಿಸುವ 'ಮಧ್ಯಾಹ್ನದ ಹೊತ್ತು ಹೊರಳೂದು ತಡವಲ್ಲ' ಎಂಬ ದಿನ ನಿತ್ಯ ಕಾಣುವ ದೃಶ್ಯದ ಉಪಮೆ ಬಹು ಅರ್ಥ ವತ್ತಾಗಿದೆ; ಸಮರ್ಪಕವಾಗಿದೆ ಗರತಿಯ ಮಾತಿನ ಸತ್ಯ ದರ್ಶನವೆ 'ಸುರಚಾಪಂಬೋಲ್, ವಿದ್ಯುಲ್ಲತೆಗಳವೊಲ್, ಮಂಜುವೊಲ್ ತೋರಿ ಬೇಗಂ ಪರಿಗುಂ ಶ್ರೀರೂಪ ಲೀಲಾಧನ ವಿಭವ ಮಹಾರಾಶಿಗಳ್ ನಿಲ್ಲವಾರ್ಗಂ' ಎಂಬ ಶಿಲಾಶಾಸ ನೋಕ್ತಿಯಲ್ಲಿ ನಿನದಿಸುವುದನ್ನು ನೋಡಬಹುದಾಗಿದೆ. 'ಸಿರಿ ಬಂದ ಕಾಲಕ್ಕೆ ಕರೆದು ದಾನ ಮಾಡುವುದೇ ನೀತಿ.

ಹಸುವಿಗೆ ಹಾಲ್ಕೊಟ್ಟು ಶಿಸುವಿಗೆ ಬೆಣ್ಣೀ ಕೊಟ್ಟು ।
ಬಿಸಿಲಿಗಿ ನಿಂತವರ ನೆರಳಿಗೆ। ಕರೆದರ
ಅಸವಲ್ಲದ ಪುಣ್ಯ ಮಗನೀಗೆ॥

ದೇವಪೂಜೆಯೊಂದೇ ಸತ್ಫಲಗಳನ್ನು ಕೊಡುವುದಲ್ಲ; ಹಸು ಮಕ್ಕಳು, ಶಿಸುಗಳಿಗೆ ಹಾಲು ಬೆಣ್ಣೆಗಳನ್ನು ಕೊಡುವುದು, ಕಷ್ಟ

ದಲ್ಲಿರುವವರಿಗೆ ಸಹಾಯದ ತಂಪನ್ನೀಯುವುದು ಸಹ ಅಸಾಮಾನ್ಯ ಪುಣ್ಯಕ್ಕೆ ದಾರಿ ಮಾಡಿಕೊಡುವುದೆಂದು ತಾಯಿ ಮಗನಿಗೆ ಹೇಳುತ್ತಾಳೆ. ಸಹಜೀವಿಗಳೊಡನೆ ನೋವು, ನಲಿವುಗಳನ್ನು ಹಂಚಿಕೊಳ್ಳುತ್ತ ಬಾಳುವುದೇ ಸಮಾಜದಲ್ಲಿ ವ್ಯಕ್ತಿ ಇಟ್ಟುಕೊಳ್ಳಬೇಕಾದ ನೀತಿ. ಕೊಡುವುದು ಜೀವನದ ಸಹಜ ರೀತಿಯಾದರೆ ಕೊಟ್ಟದ್ದನ್ನು ನೆನೆಯದೆ ಇರುವುದು ದಾನದ ಸಹಜ ನೀತಿ. ಈ ಅಂತರಾರ್ಥವನ್ನೂ ತಾಯಿ ಹೇಳದೆ ಬಿಡುವದಿಲ್ಲ.

> ಕೊಟ್ಟು ಕುದಿಯಲು ಬೇಡ ಇಟ್ಟು ಹಂಗಿಸಬೇಡ ।
> ಇಷ್ಟುಂಡರೆಂದು ಅನಬ್ಯಾಡ। ಈ ಮೂರು
> ಮುಟ್ಟ್ಯಾವ ಶಿವನ ಸದರಿಗೆ ॥

ದಾನ ಕೊಟ್ಟು, ಅನ್ನವಿಟ್ಟು ಕುದಿದು ಕೋಟಲೆಗೊಂಡು ಹಂಗಿಸದಿದ್ದರೆ ಆ ದಾನವೇ ಮಹಾದಾನವಾಗಿ ಶಿವನ ದೃಷ್ಟಿಪಥಕ್ಕೆ ಬೀಳುತ್ತದೆ. ಶಿವಕೃಪೆಗೆ ಈ ದಾನಿ ಪಾತ್ರನಾಗುವನು. ಶಿವಕೃಪೆಗೆ ಒಳಗಾಗುವ ಸುಖಕ್ಕಿಂತ ಮಿಗಿಲಾದ ಸುಖ ಜೀವನದಲ್ಲಿ ಬೇರೆಲ್ಲಿಯಿದೆ? 'ಮಾಡಿದೆನೆಂಬುದು ಮನದಲ್ಲಿ ಹೊಳೆಯದಿದ್ದೊಡೆ ಬೇಡಿದ್ದನೀವ ನಮ್ಮ ಕೂಡಲ ಸಂಗಮ ದೇವ'. ಇಂತು ಮಾಡುವ, ನೀಡುವ ಕಾರ್ಯದಲ್ಲಡಗಿರುವ ಮರ್ಮವನ್ನು ಜನಪದ ನುಡಿ ತೆರೆದು ತೋರಿಸಿದೆ.

ನೀತಿಯ ನುಡಿಗಳನ್ನು ಕೇಳಿ, ಆಚರಿಸಿ ಜನತೆ ಶಾಶ್ವತವಾಗಿ ಸಜ್ಜನರಾಗಿ ಬಿಟ್ಟಿದ್ದರೆ, ಜನಜೀವನಕ್ಕೆ ಮತ್ತೆ ಮತ್ತೆ

ಮಹಾಪುರುಷರು, ಗರತಿಯಂಥವರು ಹುಟ್ಟಿ ಬರುವ ಪ್ರಮೇ
ಯವೇ ಇರಲಿಲ್ಲ. ಆದರೆ ಇದು ನಾಯಿಯು ಬಾಲದಂತೆ ನೀತಿ
ಯ ನುಡಿಗೆ ಸಮಾಜದಲ್ಲಿ ಅಪಹಾಸ್ಯ. ತಿರಸ್ಕಾರವೂ ಇದ್ದದ್ದೇ.
ಸಿರಿವಂತ ಜನ ಏನೇ ನುಡಿಯಲಿ, ಜನ ಮರುಳಾಗಿ ಕಿವಿದೆರೆದು
ಕೇಳುವುದು. ಇಂಥ ಜನತೆಯ ಅಜ್ಞಾನವನ್ನೂ ಗರತಿ ಹೇಳದೇ
ಬಿಡುವುದಿಲ್ಲ.

ಬಡವಿ ಆಡಿದ ಮಾತು ನುಡಿ ನುಡಿಗೆ ಬ್ಯಾಸರ |
ಒಡವಿ ಇಟ್ಟವ್ವ ಒನಬನದು | ಹೇಳಿದರ
ನುಡನುಡಿಗೆ ಬಾಯ ಬಿಡತಾರ ||

ಣ ನುಡಿದಾಗ ಹೆಣವೇ ಬಾಯಿ ಬಿಡುವುದಂತೆ! ಇನು,
ಸಾಮಾನ್ಯ ಜೀವಿಗಳ ಪಾಡೇನು? ನೀತಿಯೇ ಮಾನವಾಗಿರುವ
ಗರತಿ ಧನದಲ್ಲಿ ಬಡವಿ. ಆದರೆ ಜೀವನ ಮೌಲ್ಯದ ನಿಧಿಯಾಕೆ.
ಪ್ಪರು ಜನಪದ ಸಾಹಿತ್ಯವನ್ನು ಅಸಡ್ಡೆಯಿಂದ ಕಂಡರೆ, ಜನಪದ
ನೀತಿಯ ನುಡಿಯನ್ನು ಜನತೆಯೇ ಬೇಸರ ಮಾಡಿಕೊಳ್ಳುವುದು
ಜೀವನದಲ್ಲಿಯ ಅಜ್ಞಾನದ ಸೋಜಿಗ! ಈ ಅಜ್ಞಾನಕ್ಕೆ ಮರು
ದೇ ಗರತಿಯ ಉತ್ತರ. ಅವಳ ಮಾತು ಜ್ಞಾನದ ಸಾಗರದಲ್ಲಿ
ರ್ಗರೆಯುತ್ತ ಬರುವ ಬೆಡಗಿನ ಹಿರಿಯ ತೆರೆಯಲ್ಲ; ಸತ್ಯ,
ತ್ವಿಕತೆಗಳ ಬೆಳಕಿಗೆ ಪಾರದರ್ಶಕವಾಗಿ ಉರುಳುವ ಕಿರು
ರಿ. ಹಿತವಚನ ಜನರ ಕಿವಿಗೆ ಸೇರದೇ ವ್ಯರ್ಥವಾದಾಗಲೂ
ಕ್ಕೆ ಒಳ್ಳೆಯದಾಗಬೇಕೆಂಬ ಆವಳ ಹಂಬಲ ಕಡಿಮೆ
ಗದು. ತುಸು ಚುಚ್ಚಿಯಾದರೂ ಮಾತನಾಡಿ ಎಚ್ಚರ

ಹುಟ್ಟಿಸಬೇಕೆಂದು ಆಕೆ—

ಮಂದೇನು ಕೊಟ್ಟೀತು ಮನವೇನು ದಣಿದೀತು|
ಮುಂಜಾನದಾನ ಗಿರಿಮಲ್ಲ | ಕೊಟ್ಟರ
ಮನಿ ತುಂಬಿ ನಮ್ಮ ಮನ ತುಂಬಿ ||

ಎಂದು ಹಾಡುವಳು. ಹಸಿವೆ, ನೀರಡಿಕೆಗಳಂಥ ಪಂಚೇಂದ್ರಿಯಗಳ ತೃಷೆಯನ್ನು ತೀರಿಸುವ ಜನದಾನವೇ ಮಹಾದಾನವಲ್ಲ. ಅವರೆಷ್ಟು ಕೊಟ್ಟಾರು? ಜನದ ನೋವು ಎಷ್ಟು ಕಡಿಮೆಯಾದೀತು? ಪಂಚೇಂದ್ರಿಯಗಳ ಸುಖವನ್ನು ಮೀರಿನಿಂತ, ಪರಮಾತ್ಮನು ಕೊಡುವ. ಕೃಪಾಸುಖ ಮನೆ, ಮನಗಳನ್ನು ಬೆಳಗಬಲ್ಲುದು; ತಣಿಸಬಲ್ಲುದು.

ಅತ್ತ ಮಕ್ಕಳ ಕೈಗೆ ತುತ್ತೊಟ್ಟಿ ಕೊಡಲಿಲ್ಲ |
ಮಕ್ಕಳ ಬೇಡಿ ಪರುವತಕ | ಹೋದರ
ಮುಕ್ಕಣ್ಣ ಶಿವನು ನಗನೇನ ||

ಅಳುವ ಮಕ್ಕಳ ಕೈಗೆ ಯಾವುದೇ ತಿಂಡಿಯನ್ನಿತ್ತು, ಕೊನೆಗೆ ತುತ್ತ ರೊಟ್ಟಿ ಕೊಟ್ಟು ಆನಂದ ಪಡೆಯದ ಹೆಣ್ಣಿಗೆ ತಾಯ್ತನದ ಬಯಕೆ ಮರುಳುತನ. ಮುಗ್ಧ ಶಿಸುವಿನ ನೋವನ್ನೇ ಅರಿಯದ ಹೆಣ್ಣಿನ ಪೂಜೆ ಪರಮಾತ್ಮನಿಗೆ ಬೇಸರ, ನಗೆಯನ್ನು ತರುತ್ತದೆ. ಇದರಲ್ಲಿ ಸೋಜಿಗವೇನಿಲ್ಲ. 'ಉಂಬುವ ಜಂಗಮ ಮನೆಗೆ ಬಂದರೆ ಮುಂದೆ ಸಾಗು ಎಂದು ಹೇ[illegible] ಉಣ್ಣದ ಲಿಂಗಕ್ಕೆ ಬೋನವ ಎಡೆ ಹಿಡಿಯುವ ಮಾಟವ ಭಕ್ತಿ

ದಿಟದ ಭಕ್ತಿಗೆ ಬಹುದೂರ ಎಂದು ಗರತಿ ಎಚ್ಚರಿಸುತ್ತಾಳೆ. ನಿರ್ಮಲ ವಾತ್ಸಲ್ಯ, ನೋವಿಗೆ ಮರುಗುವ ಹೃದಯ ಶಿವನು ಕೊಡುವುದಕ್ಕಿಂತ ಹೆಚ್ಚಿನದನ್ನು ನಮಗೆ ತಂದುಕೊಡುತ್ತವೆ. ಈ ಭಾವವಿಲ್ಲದೆ ಮಾಡುವ ದೇವಪೂಜೆ ವ್ಯರ್ಥ.

ಬಡತನ ಬಂದರ ಬಡಿಬ್ಯಾಡ ಮಕ್ಕಳನ।
ಅಡ್ಯಾಡಿ ಬಂದು ತೊಡಿಮ್ಯಾಲೆ। ಕೂತರ
ಬಂದ ಬಡತನ ಬೈಲಾಗಿ॥

'ಬಡತನ ನನಗಿರಲಿ, ಬಹಳ ಮಕ್ಕಳು ಇರಲಿ' ಎಂದು ಹಾರೈಸಿ ಪಡೆದ ಮಕ್ಕಳನ್ನು ಸಲಹುವದಕ್ಕೂ ತಾಯಿಗೆ ಸಹನೆ ಬೇಕು. ಬಡತನ ಸಂಕಟವನ್ನುಂಟುಮಾಡಬಹುದು. ಆದರೆ ಆ ಸಂಕಟ ಮನೆಯಲ್ಲಿ ಒಳ ಹೊರಗಾಡುವ ಮಕ್ಕಳ ಆನಂದದಿಂದ ಕರಗಿ ಹೋಗುವುದು. ಧನ ಕೊಡುವ ಸುಖಕ್ಕಿಂತ ಮಕ್ಕಳು ಕೊಡುವ ಸುಖ ಜೀವನದಲ್ಲಿ ಹಿರಿದಾದುದು. ಆನಂದದ ಆಗರವಾಗಿರುವ ಮಕ್ಕಳನ್ನು ತಾಯಿ ಬಡತನದ ಬೇಗೆಯಲ್ಲಿ ಬಳಲಿದರೂ ಹೊಡೆಯಬಾರದು.

ಜೀವನದ ಆಸೆ-ಕೋರಿಕೆಗಳಿಂದ ಬೇಸರಗೊಂಡ ವ್ಯಕ್ತಿ ಮಕ್ಕಳನ್ನು ಬಡಿಯುವಂತೆ, ತುಂಬಿ ನಿಂತ ಹೊಲದಲ್ಲಿ ಹೊಡೆದಂಟು ತಿಂದ ಬಸವನನ್ನು ಸ್ವಾರ್ಥದ ಕಾರಣವಾಗಿ ಒಕ್ಕಲಿಗ ಒಮ್ಮೊಮ್ಮೆ ಬಡಿಯುವನು. ಆಗ ಆ ಬಸವಣ್ಣ ಪರಿತಪಿಸಿ ಮಾನವನ ಸ್ವಾರ್ಥಲೋಲುಪತೆಯನ್ನು ಸ್ವಾರಸ್ಯವಾಗಿ ವಿಮರ್ಶಿಸುತ್ತದೆ.

ನಾವೊಂದು ಬಿತ್ತೀದ ನಾ ಒಂದ ಬೆಳದೀದ ।
ನಾ ಹೋಗಿ ಒಂದು ಹೊಡೆದಾಟು ! ತಿಂದರ
ಬಡಗೀಲೆ ಹೊಡೆದ್ಯೋ । ನಮ್ಮ ಜೀವ ಹೋದಾವ
ಕೈಲಾಸಕ ॥

ಕೂರಿಗೆಯು ಒಂದು ತಾಳು ಪಶು-ಪಕ್ಷಿಗಳಿಗೆ ಎಂದು ಹಾಡಿದ ಒಕ್ಕಲಿಗನೇ ಹೀಗೆ ಮಾಡಿದರೆ ಬಸವನ ಗತಿಯೇನು ? ಅವನೇ ಬಿತ್ತಿದ್ದು, ಅವನೇ ಬೆಳೆದದ್ದು. ಆದರೆ ಅದರ ಸುಖ ಅವನಿಗೇ ಇಲ್ಲ ! ಮೇಲೆ ಬಡಿಗಿಯ ಏಟು. ಹೀಗಾದಾಗ ನಮ್ಮ ಪ್ರಾಣ ಹೋದಾವೂ ಕೈಲಾಸಕ ಎಂದು ರೈತನಿಗೆ ಎತ್ತು ಹೇಳುವ ವಾಚ್ಯಾರ್ಥವೂ ಇಲ್ಲಿದೆ; ದುಡಿದದ್ದೆಲ್ಲ ತನಗೇ ಇರಲಿ ಎಂಬ ಸ್ವಾರ್ಥ ಬುದ್ಧಿಯ ಮಾನವರ ನಡುವೆ ಬದುಕುವುದು ಕಷ್ಟ ! ನನಗೆ ಶಿವನ ಸನ್ನಿಧಿಯ ಸ್ವಚ್ಛಂದ ಸುಖವೇ ನೆನಪಾಗಿ. ಜೀವ ಕೈಲಾಸವನ್ನು ನೆನಪಿಗೆ ತಂದುಕೊಳ್ಳುತ್ತಿದೆ ಎಂಬ ಸೂಚ್ಯಾರ್ಥವೂ ಭಾವಗೋಚರವಾಗುವುದು.

ಧನಲೋಭ, ಸ್ವಾರ್ಥಬುದ್ಧಿ ಮನುಷ್ಯನನ್ನು ಸುತ್ತಿ ಕಂಗೆಡಿಸುವಂತೆ ಹರೆಯವೂ ಅವನ ದೇಹದಲ್ಲಿ ಕಾಲಿರಿಸಿ ಮದ ವೇರಿಸುವುದುಂಟು. ಮನುಷ್ಯನು ಇದರ ಸೆಳೆತಕ್ಕೆ ಸಿಕ್ಕು ದಿಕ್ಕುಪಾಲಾಗಿ ಹೋಗಬಾರದೆಂದೇ ಗರತಿಯ ಬಲವಾದ ಇಚ್ಛೆ. ಹೆಣ್ಣು-ಗಂಡುಗಳಿಗೆ ಹರೆಯ ಬರುವುದು ಸಹಜ. ಆದರೆ ಈ ಹರೆಯದ ಉಕ್ಕು ಸಾಮಾಜಿಕ ಸ್ವಾಸ್ಥ್ಯಕ್ಕೆ, ಕೌಟುಂಬಿಕ ಘನತೆಗೆ, ಗಂಡು-ಹೆಣ್ಣಿನ ಸ್ವಂತ ವ್ಯಕ್ತಿತ್ವಕ್ಕೆ ಕುಂದು ತರಬಾರದು. ಪ್ರಾಯದ ಮಬ್ಬಿನಲ್ಲಿರುವ ತರುಣ-ತರುಣಿಯರಿಗ ಗರತಿಯು ಸಂದೇಶವಿದು—

ಹೆಣ್ಣಿಂದ ರಾವಣ ಮಣ್ಣುಗೂಡಿದನಯ್ಯ ।
ಅನ್ನಿಗರ ಹೆಣ್ಣು ಬಯಸದೆ । ಕಂದಯ್ಯ
ನಿನ್ನ ಹೆಣ್ಣೊಡನೆ ಸುಖಿಯಾಗು।

ಹೆಣ್ಣಿನ ಮೋಹ ಮನುಷ್ಯನನ್ನು ಮಣ್ಣುಗೂಡಿಸಿಯೇ ಬಿಡುತ್ತದೆ. ಇದಕ್ಕೆ ತಕ್ಕ ನಿದರ್ಶನ ರಾವಣನ ಚರಿತ್ರೆ. ಚಂಚಲ ಬಯಕೆಗಳಿಗೆಲ್ಲ ಭ್ರಮೆಗೊಂಡು ತಿರುಗಿದರೆ ಮಾನವನಿಗೂ ಅದೇ ಗತಿ. ಕೆಟ್ಟದ್ದನ್ನು ಕಲಿಯುವುದು, ಕೆಟ್ಟದ್ದಕ್ಕೆ ಒಲಿಯುವುದು ಬಹು ಸರಳ. ಉತ್ತಮಿಕೆಯನ್ನು ನಂಬುವುದು, ನಂಬಿಕೆಯಂತೆ ನಡೆಯುವುದು ಕಷ್ಟಸಾಧ್ಯ. ತನ್ನ ಹೆಣ್ಣನ್ನು ನಂಬಿ ಜೀವನ ಸಾಗಿಸಿದರೆ ಬಾಳಿನಲ್ಲಿ ಎಂಥವನಿಗಾದರೂ ಸುಖ ಸಿಗುವುದು.

ಮಲ್ಲಿಗಿ ಇದ್ದಾಗ ಮುಳ್ಳ್ಯಾಕ ಮುಡಿಯುವೆ।
ಕಲ್ಯಾಣದಾಗ ಬಸವಯ್ಯ। ಇರುವಾಗ
ಕಲ್ಗ್ಯಾಕ ಕೈಯ ಮುಗಿಯುವೆ॥

ಜಡ, ಚೇತನಗಳ ಸ್ವರೂಪವನ್ನು. ಸುಖ ಅಸುಖಗಳ ನಿಚ್ಚಳ ರೂಪವನ್ನು ಈ ನುಡಿ ಬಿಂಬಿಸುತ್ತದೆ ತನ್ನ ಸುಖ-ಭೋಗಗಳಿಗೆಲ್ಲ ಮಲ್ಲಿಗೆಯಂತೆ ಮಧುರತಮ ಸತಿ ಇರುವಾಗ, ಸೂಳೆಯ ಸಂಗದ ಮುಳ್ಳಿನ ಸವಿ, ನಂಜಿನ ರುಚಿ ಇದು ತರವಲ್ಲ. ಇಂಥ ಕಲ್ಯಾಣ ಗುಣಗಳನ್ನು ಅರಿತಲ್ಲಿಯೇ ಬಸವಣ್ಣ ಹರಕೆ ಕೊಡಲು ಅಲ್ಲಿ ನಿಂತಿರುತ್ತಾನೆ. ಈ ದರ್ಶನ ಮನುಷ್ಯನ ಅಂತರಂಗದಲ್ಲಿ ಮೂಡದಿದ್ದರೆ ದೇವರೇನು ಮಾಡಿ

ಯಾಸು? ಪದ್ಯದಲ್ಲಿ ಹುದುಗಿರುವ ಭಾವಾರ್ಥ. ದೃಷ್ಟಾಂತ
ಸೊಗಸು ಮೆಚ್ಚುವಂತಹದು. ಹೆಣ್ಣಿನ ಹುಚ್ಚು ನೆತ್ತಿಗೇ
ದವನಿಗೆ ಇದೆಲ್ಲ ವ್ಯರ್ಥಾಲಾಪ. ಕೊನೆಗವನು ತನ್ನ ಅಸೀತಿ
ತಾನೇ ನರಕವನ್ನನುಭವಿಸುವ ಸಮಯ ಬಂದೇ ಬರುವುದು.

ಸೂಳಿಗೆ ಹೋದಾವ ಏನಾದ ಎಂತಾದ।
ಕಾಡು ನಾಯಾದ ಕಪಿಯಾದ। ಮರು ದಿನ
ಸೂಳಿ ಕಾಲೀಗೆ ಕೆರವಾದ॥

ಅರಿಯಾಗದ ಪ್ರೇಮಭಾಗ್ಯವನ್ನು ಪತಿಗೆ ಸೂರೆ ಮಾಡಬಲ್ಲ
ಸತಿ ಮನೆಯಲ್ಲಿದ್ದಾಗಲೂ, ದೇಹಸಿರಿಯನ್ನು, ದ್ರವ್ಯವನ
ಹೀರಿಕೊಳ್ಳುವ ಸೂಳೆಗೆ ಹೋದವ ನಾಯಾಗಿ, ಕಪಿಯಾಗಿ
ಕಡೆಗೆ ರೊಕ್ಕ ತೀರಿದ ಮರು ದಿನ ಅವಳ ಕೆರವಿಗೆ ಸಮಾನನಾ
ನಿಕೃಷ್ಟನಾಗುವನು. ಆದುದರಿಂದಲೇ ನೀತಿವಂತನಾಗೆಂದು
ಮಗನಿಗೆ ತಾಯಿ ಉಪದೇಶ ಮಾಡುತ್ತಾಳೆ.

ಸುಳ್ಳು ಹೇಳಲಿ ಬೇಡ ಕಳುವು ಮಾಡಲಿ ಬೇಡ।
ಒಳ್ಳೆಯ ಹಾದಿ ಬಿಡಬೇಡ। ನನ ತಮ್ಮ
ಹೊಳ್ಳಿ ನೋಡಬೇಡ ಪರ ಹೆಣ್ಣ॥

ಸುಳ್ಳು, ಕಳುವುಗಳನ್ನು ಮಾಡದಿರುವಂತೆ ತನ್ನ ತಮ್ಮನ
ಇನ್ನೊಬ್ಬರ ಹೆಣ್ಣನ್ನು ಹೊರಳಿಯೂ ನೋಡಬಾರದೆಂದ
ಗರತಿ ಹೇಳುತ್ತಾಳೆ. ತಮ್ಮ ಒಳ್ಳೆಯವರ ಸಂಗದಲ್ಲಿ
ಇರಬೇಕು 'ಸಜ್ಜನರ ಸಂಗವದು ಹೆಜ್ಜೇನು ಸವಿದಂತೆ!

ಒಳ್ಳೆವರ ಗೆಳತನ ಕಲ್ಲಸಕ್ಕರಿ ಹಾಂಗ।
ಕುಲ್ಲರ ಗೆಳೆತನ ಮಾಡಿದರ। ನನ ತಮ್ಮ
ಸಲ್ಲದ ಮಾತು ಬರತಾವ॥

ಕ್ಷುಲ್ಲಕರ ಸಹವಾಸ ಕೆಸರ ಮೇಲೆ ಕಲ್ಲ ಹಾಕಿ ಮೈ ಹೊಲಸು ಮಾಡಿಕೊಂಡಂತೆ. ಮುದುಕರು ಹುಡಿಗೆಯರನ್ನು ಲಗ್ನವಾಗು ವುದೂ ಒಂದು ಮನೋಜಾಡ್ಯ; ಸಾಮಾಜಿಕ ಜಾಡ್ಯ; ಗರತಿ ಯಲ್ಲಿ ಈ ಜಾಡ್ಯಕ್ಕೂ ಮದ್ದಿದೆ.

ಕುರಿಯ ಕಾಯುವಗ ಕಿರಿ ಬಿದಿರ ಕೊಳಲ್ಯಾಕ।
ನೆರೆ ಬಂದ ಮ್ಯಾಲೆ ಹುಡಿಗ್ಯಾಕ। ಜೋಳದ
ತೆನಿ ಬಿದ್ದ ಮ್ಯಾಲೆ ಕವಣ್ಯಾಕ॥

ಹೊಂದಾಣಿಕೆಯಿಲ್ಲದ ದಾಂಪತ್ಯ ವಿರಸದ ಸೆಣಸಾಟ; ಅನು ರೂಪ ಪತಿ-ಪತ್ನಿಯರ ಹೊಂದಿಕೆಯು ಬಾಳು ಸರಸದ ಸುಗ್ಗಿ. ಹರಯವೇ ಬಿದ್ದು ಹೋದ ಮೇಲೆ ಹೆಣ್ಣಿನ ಮೇಲೆ ಗುರಿ ಯಿಡುವುದು ಯಾವ ಲಾಭಕ್ಕಾಗಿ? ಕುರುಬನಿಗೆ ಕಿರಿ ಕೊಳಲು ಹೊಂದಿಕೆಯಾಗದು.

ನಮ್ಮ ನಾಡ ಗರತಿ ಹೆಣ್ಣಿಗೂ ನೀತಿ ಬೋಧೆ ಮಾಡದೇ ಬಿಟ್ಟಿಲ್ಲ. ತಾಯಿ ಮಗಳ ಅನ್ಯೋನ್ಯ ಬಾಂಧವ್ಯವನ್ನು ಮನ ಕರಗುವಂತೆ ಹಾಡಿದ್ದರೂ. ನೀತಿಬಾಹಿರವಾದ ಮಗ ಳನ್ನು ತಾಯಿ ಮನ್ನಿಸಲು ಸಾಧ್ಯವಿಲ್ಲ. 'ದಟ್ಟಿಯ ಉಡುವ ಧರಣಿಯ ಹಡೆದರ ಮಕ್ಕಳ ತಾಯಿ' ಆದೆನೆಂದು ಹರುಷ

ಗೊಳ್ಳುವ ಹೆಂಗರುಳಿನ ತಾಯಿ, ಮತಿಗೆಟ್ಟ ಮಗಳನ್ನು, ಬಾಳುವೆ ಕೆಡಿಸಿದ ಹೆಣ್ಣನ್ನು ತನಗಷ್ಟೇ ವೈರಿಯೆಂದು ಭಾವಿಸುವದಿಲ್ಲ. ಹೆತ್ತ ಕುಲಕ್ಕೇ ಹಗೆಯೆಂದು ಸಾರಿ ಅಂಥವರನ್ನು ಧಿಕ್ಕರಿಸುವಳು. ನೀತಿಗೆ ಹೃದಯದ ಮಮತೆಯನ್ನೇ ಸುರಿಯುವ ತಾಯಿಯ ಮೃದುಹೃದಯ, ಅನೀತಿಗೆ ವಜ್ರಕಠೋರವಾಗಿ ನಿಲ್ಲುವುದು. ಇಂಥ ಶೀಲವೇ ನೀತಿಯ ಗೋಪುರಕ್ಕೆ ಕಳಸವಿಡಲು ಸಾಧ್ಯವಿದೆ.

**ಅತ್ತೆ-ಮಾವಗಂಜಿ ಸುತ್ತೇಳು ನೆರೆಗಂಜಿ!**
**ಮತ್ತೆ ಆಳುವ ದೊರೆಗಂಜಿ! ನನ ಮಗಳೆ**
**ಅತ್ತಿ ಮನಿಯೊಳಗ ಬಾಳವ್ವ ॥**

ಅತ್ತೆಯ ಮನೆಯಲ್ಲಿ ಮಗಳು ಸೊಸೆಯಾಗಿ ಹೇಗೆ ಜೀವಿಸಬೇಕೆಂಬ ನೀತಿಯನ್ನು ಹೇಳಿಯೇ ತಾಯಿ ಮಗಳನ್ನು ಬೀಳ್ಕೊಡುತ್ತಾಳೆ. ಮಗಳು ಸೊಸೆಯಾಗಿ ತನ್ನ ನೀತಿ, ಪ್ರೀತಿ, ಪತಿಭಕ್ತಿಗಳಿಂದ ಮನೆ ಗೆದ್ದು ಮಾರನ್ನೂ ಗೆಲ್ಲಬೇಕೆಂಬುದೆ ತಾಯಿಯ ಹಿರಿಯಾಶೆ 'ಚಂದದಲಿ ನೀ ಹಾಂಗ ಬಾಳಿದರ ಚಂದಿರನ ಬೆಳಕು ಬಿದ್ಹಾಂಗ' ಎಂದು ತಾಯಿ ತಿಳಿ ಹೇಳುವಳು. ಮಗಳ ನೀತಿಯ ನಡೆ, ಚಂದ್ರನ ಶೀತಲ ಬೆಳದಿಂಗಳು ಭೂಮಿ, ಆಕಾಶಗಳನ್ನು ತಬ್ಬಿ ಶೋಭಾಯಮಾನವಾಗಿರುವಂತೆ, ತವರುಮನೆ-ಪತಿಯ ಮನೆಗಳಿಗೆ ಹಿತಕರವಾದ ಬೆಳಕನ್ನು ಕೊಡುವುದು.

ನಮ್ಮ ಸಮಾಜದಲ್ಲಿ ಕೆಲವು ಸಾಮಾಜಿಕ ದುರಭ್ಯಾಸ

ಗಳೂ ಉಂಟು. ಗಂಡ ಸತ್ತ ಹೆಣ್ಣುಮಗಳನ್ನು ಕೀಳಾಗಿ ಕಾಣುವುದು ಅಂಥವುಗಳಲ್ಲೊಂದು. ಮುತ್ತೈದೆ ಸಾವು ಇರದ ಭಾಗ್ಯಹೀನೆ ಸಮಾಜದ ಕಣ್ಣಲ್ಲಿ ಹುಣ್ಣು! ಸ್ತ್ರೀ ಹೃದಯದ ನೋವನ್ನರಿಯಬಲ್ಲ ಗರತಿಯ ಸಹಾನುಭೂತಿ ವಿಧವೆಯ ಮೇಲೂ ಬೀಳದಿಲ್ಲ ವಿಧವೆಯ ಪವಿತ್ರ ಜೀವನಾಕಾಂಕ್ಷೆಯನ್ನು ಜಗಕ್ಕೆ ತಿಳಿಸಿಕೊಟ್ಟು ಗರತಿ ಸಮಾಜದ ಕಣ್ಣನ್ನು ತೆರೆಸುತ್ತಾಳೆ.

ಗಂಡ ಸತ್ತವ್ನಗ ರಂಡೆಮುಂಡೆನಬೇಡ ।
ಕಂದನ ಹಿಡಿದು ತಪ ಹಾಳ । ಅವಳೀಗಿ
ಗಂಗಾದೇವೆಂದು ಕರಿಬೇಕ ॥

ಪತಿವಿಯೋಗದಿಂದ ಜೀವಕ್ಕೆರವಾಗಬೇಕೆಂದು ಆಶಿಸಿದ ಹೆಣ್ಣನ್ನು 'ನಿರಿ ಹಿಡಿದು ನಡವೇರಿ ಕೊರಗ ನಗಿಸುವ ಮಗು' ತಡೆದು ನಿಲ್ಲಿಸಿತು. ಅಂದಿನಿಂದ ಮಗುವನ್ನು ಬೆಳಗಿಸುವ ಮಹಾವ್ರತವನ್ನು ಕೈಕೊಂಡು ಅವಳು ಜೀವಿಸುತ್ತಿದ್ದಾಳೆ. ಅಂಥ ಪವಿತ್ರ ಜೀವಿಯನ್ನು ಗಂಗಾಭಾಗೀರತಿ ಎಂದು ಕರೆಯುವ ನೈಜ ಪ್ರಜ್ಞೆ ಜನಕ್ಕೆ ಬರಬೇಕು. ಗಂಗಾದೇವಿಯ ಹಿರಿಯ ಗುಣ ಲೋಕೋತ್ತರವಾದುದು. ಶಂತನುವಿನ ಮಗ ದೇವವ್ರತನನ್ನು ಹುಟ್ಟಿನಿಂದ ಸಾಕಿ ಸಲುಹಿ ಕೊನೆಗೆ ಆ ಬಾಲಕನನ್ನು ತಂದೆಗೊಪ್ಪಿಸಿದ ಮಹಾಕರುಣೆ ಗಂಗಾದೇವಿಯದು. ಪರದೇಶಿಯಾಗಿದ್ದ ದೇವವ್ರತನನ್ನು ಗಂಗೆ ಸಲುಹದೇ ಹೋಗಿದ್ದರೆ ಅವನು ಭೀಷ್ಮನಾಗಿ, ಗಾಂಗೇಯನಾಗಿ ಮಹಾಭಾರತದಲ್ಲಿ ಬದುಕುವುದು

ಸಾಧ್ಯವಿರಲಿಲ್ಲ. ಈ ಸತ್ಯ ಪ್ರಾಯಶಃ ಗರತಿಯ ಎದೆಯನ್ನು ತಟ್ಟಿದೆ; ಹಾಡಾಗಿ ಹರಿದು ಜನದೆದೆಯನ್ನು ಮುಟ್ಟಿದೆ.

ಹೀಗೆ ಇನ್ನೂ ಹಲವಾರು ಬಗೆಯಲ್ಲಿ ಹರಿದು ನಾಡಿನ ಜನರ ಎದೆಯ ಕೊಳೆಯನ್ನು ತೊಳೆದು ಹಸನುಗೊಳಿಸಿರುವ ಗರತಿಯ ನೀತಿ ಜಾಗತಿಕ ಜೀವನ ನೀತಿಯ ಮಟ್ಟವನ್ನು ಏರಿ ನಿಂತಿದೆ. ಅವಳು ಹಾಡಿರುವ ಈ ಒಂದು ಕೆಳಗಿನ ಹಾಡು ಬಾಳ ಧರ್ಮದ ಕಥೆಗೆ ಭರತವಾಕ್ಯದಂತಿರುವುದು.

ಮಂದಿ ಮಕ್ಕಳಾಗ ಚಂದಾಗಿ ಇರಬೇಕು ।<br>
ನಂದೀಯ ಶಿವನ ದಯದಿಂದ । ಹೋಗಾಗೆ<br>
ಮಂದಿ ಬಾಯಾಗ ಇರಬೇಕ ॥

——

# ೬. ಜೀವನ ಧರ್ಮಕ್ಕೆ ಹೆಣ್ಣು ತುಂಬಿದ ಹಿರಿಮೆ

ಮಾನವನ ಬಾಳಿನ ಸೊಗಸು, ಶ್ರೇಷ್ಠತೆಗಳಿಗೆ ಹೆಣ್ಣು ಸಲ್ಲಿಸಿರುವ ಸೇವೆಯ ಪಾಲು ಬಹು ದೊಡ್ಡದು. ಅದು ಬರೀ ಹಿರಿದಷ್ಟೇ ಅಲ್ಲ, ಗೌರವಾಶ್ಚರ್ಯಗಳನ್ನು ಏಕ ಕಾಲಕ್ಕೆ ಹುಟ್ಟಿಸುವಂತಹುದು. ಜಗತ್ತಿನ ಇನ್ನುಳಿದ ರಾಷ್ಟ್ರಗಳ ಸ್ತ್ರೀ ಚರಿತ್ರೆ ಹೇಗೇ ಇರಲಿ. ಭಾರತದ ಸ್ತ್ರೀ ಮಾತ್ರ ತನ್ನ ಕೆಲವೊಂದು ವೈಶಿಷ್ಟ್ಯಪೂರ್ಣ ಮಹಾಗುಣಗಳಿಂದ ಲೋಕವಂದ್ಯಳಾಗಿರುವಳು. ಪರಂಪರಾಗತವಾಗಿ ಬಂದ ನಮ್ಮ ಸಾಮಾಜಿಕ ವ್ಯವಸ್ಥೆಗಳ ನೀತಿ ಸೂತ್ರಗಳನ್ನು ಅವಲೋಕಿಸಿದರೆ, ಹೆಣ್ಣು ಅಲ್ಲಿಂದ ಇಲ್ಲಿಯ ವರೆಗೆ ಹಲವು ಬಗೆಯ ಸಾಮಾಜಿಕ ಆಘಾತಗಳನ್ನು ಅನುಭವಿಸುತ್ತಲೇ ಬಂದಿರುವದು. ಇತಿಹಾಸದಿಂದ ವೇದ್ಯವಾಗುವುದು. ವೇದೋಪನಿಷತ್ತುಗಳಲ್ಲಿ ಕೆಲವು ಕಡೆ ಬುದ್ಧ, ಶಂಕರ, ಬಸವರಂಥ ಮಹಾತ್ಮರ ಜೀವಿತದ ಅವಧಿಯಲ್ಲಿ ಕೆಲವು ವರ್ಷ ಹೆಣ್ಣು, ಸಾಂಪ್ರದಾಯಿಕ ಸಂಕೋಲೆಗಳಿಂದ ಪಾರಾಗಿ ಬೆಳಕು ಬೀರಿದಂತೆ ಕಂಡುಬಂದರೂ, ಸಾರ್ವತ್ರಿಕವಾಗಿ ಆವಳು ಸಮಾನತೆಯನ್ನು ಅನುಭವಿಸಿಲ್ಲ. ಹೆಣ್ಣಿಗೊಂದು ನೀತಿ, ಗಂಡಿಗೊಂದು ನೀತಿ. ಇಂಥ ಗೆರೆಕೊರೆದ ನೀತಿಯ ಪರಿಮಿತಿಯಲ್ಲಿಯೂ ನಮ್ಮ ದೇಶದ ಸ್ತ್ರೀ ಜಾಳಿ ತನ್ನ ಮಾತೃ ಮಮತೆ

ಯನ್ನು, ಪವಿತ್ರ ಶೀಲವನ್ನು, ಭೂಮಾತೆಯ ಸಮಾನದ ಕ್ಷಮೆಯನ್ನು. ಲೋಕೋತ್ತರ ತ್ಯಾಗ, ಸಹನಶಕ್ತಿಯನ್ನು ಅಚ್ಚಳಿಯದೆ ಕಾಪಾಡಿಕೊಂಡು ಬಂದಿದ್ದಾಳೆ. ಇಂಥ ಅದ್ಭುತ ವ್ಯಕ್ತಿತ್ವವೇ ಆವಳಿಗೆ ದೇವತ್ವದ ಪಟ್ಟವನ್ನು ತಂದುಕೊಟ್ಟಿದೆ.

ಹೆಣ್ಣು ಶಕ್ತಿ. ಅದರ ಹಿರಿಮೆಯನ್ನು ಸಾರಲೆಂದೇ ಶಿವನು ಅರ್ಧನಾರೀ ನಟೇಶ್ವರನಾದ. ಶಿವ–ಶಕ್ತಿಯರ ಅಖಂಡತ್ವ ಸೃಷ್ಟಿಗೆ ದಾರಿ. ಅಲ್ಲಿಂದ ನಾವು ವೇದಾಗಮ ಸಾಹಿತ್ಯಗಳಲ್ಲಿ ಹೆಣ್ಣಿನ ಹಿರಿಮೆ ಸೂರೆಗೊಂಡಿರುವದನ್ನು ಕಾಣುವೆವು. 'ನ ಸ್ತ್ರೀ ಸ್ವಾತಂತ್ರ್ಯಮರ್ಹತಿ' ಎಂದ ಮನುವೇ " ಎಲ್ಲಿ ನಾರಿಯರು ಪೂಜೆಗೊಳ್ಳುವರೊ ಅಲ್ಲಿ ದೇವತೆಗಳು ನೆಲೆಸುತ್ತಾರೆ" ಎಂದು ಹೇಳಿದ. ಶಿವಶರಣರೂ ಹೆಣ್ಣನ್ನು ಪ್ರತ್ಯಕ್ಷ ಕಪಿಲಸಿದ್ಧ ಮಲ್ಲಿಕಾರ್ಜುನ ಎಂದೇ ಹಾಡಿದರು. ಮನುಜರನ್ನು ಮೊದಲು ಮಾಡಿಕೊಂಡು ಮಹಾದೇವನ ವರೆಗಿನ ಪುರುಷ ಶಕ್ತಿ ಹೆಣ್ಣನ್ನು ಇಂತು ಕೊಂಡು ಕೊನೆಯ ಬೇಕಾದರೆ ಅವಳ ಮಹತಿ ಹಿರಿದಾದುದೆಂಬುದು ವೇದ್ಯವಾಗುತ್ತದೆ. ಜನಪದ ಕಾವ್ಯದಲ್ಲಿ ವ್ಯಕ್ತವಾಗುವ ಹೆಣ್ಣಿನ ಹಿರಿಮೆಯನ್ನು ಈಗ ಪರಿಶೀಲಿಸೋಣ.

ಹೆಣ್ಣೀನ ಜನ್ಮವು ಸುಣ್ಣಾಗಿ ಕುದಿಯಲಿ ।
ಗಾಣದ್ಹಿಂಡ್ಯಾಗಿ ನುರಿಯಲಿ । ಶಿವರಾಯ
ದೀಪದೆಣ್ಣ್ಯಾಗಿ ಉರಿಯಲಿ ॥

ತನ್ನ ತನು, ಮನ, ಅಂತಃಕರಣಗಳು ಜೀವನದ ಸೊಗಸಿಗೆ ಮೀಸಲೆಂಬ ಭಾಷೆಯನ್ನು ತೊಟ್ಟು ಬಾಳ ಕಟ್ಟಲು ಪ್ರಾರಂಭಿಸ

ತ್ಯಾಗಿ ಹೆಣ್ಣು. ಈ ಭಾಷೆಯನ್ನವಳು ನಿರ್ಮಲ ಭಾವದಿಂದ ಪೂರೈಸಿಕೊಟ್ಟು ಸುಣ್ಣವಾಗಿ ಅರಳುವಳು. ದುಡಿತ, ಶಾಂತಿ, ಸಹನೆ, ತ್ಯಾಗ, ಪ್ರೇಮಗಳ ಎಣ್ಣೆಯನ್ನೆರೆದು ಮನುಜ ಜೀವನ ವನ್ನು ಬೆಳಗುವಳು. ಗರತಿ ಹಾಡಿರುವ ಗೀತಗಳಲ್ಲಿ ಬಹು ಮಟ್ಟಿಗೆ ಮಿಡಿಯುತ್ತಿರುವುದು ಇದೇ ಬಗೆಯ ತ್ಯಾಗದ ನಾದ ಮಾಧುರ್ಯ. ಮಾತಾಪಿತರಿಗೆ ಮಗಳಾಗಿ, ಅಕ್ಕ-ಅಣ್ಣಂದಿ ರಿಗೆ ತಂಗಿಯಾಗಿ, ತಂಗಿ-ತಮ್ಮಂದಿರಿಗೆ ಅಕ್ಕನಾಗಿ, ಕೈಹಿಡಿದ ಪತಿಗೆ ಪ್ರೀತಿಯ ಮಡದಿಯಾಗಿ, ಅತ್ತೆ-ಮಾವಂದಿರಿಗೆ ಮುತ್ತಿ ನಂಥ ಸೊಸೆಯಾಗಿ ತನ್ನ ಸ್ವಾರ್ಥತ್ಯಾಗ, ವಾತ್ಸಲ್ಯ, ಗೌರವ ಭಾವಗಳ ಮಾಧುರ್ಯವನ್ನೆರೆದು, ಜೀವ ಕಳೆಯ ಶಕ್ತಿಯಾಗಿ ಬೆರೆದು ಮಾನವ ಬಾಳಿನ ಸುಂದರ ಕಥೆಯಾಗಿ ಪರಿಣಮಿ ಸುವಳು.

**ಹಾಲುಂಡ ತವರಿಗೆ ಏನೆಂದು ಹರಸಲಿ ।**
**ಹೊಳೆ ದಂಡಿಲಿರುವ ಕರಕಿಯ । ಕುಡಿ ಹಾಂಗ**
**ಹಬ್ಬಲಿ ಅವರ ರಸಬಳ್ಳಿ ॥**

ಹುಟ್ಟಿ ಬಂದ ವ್ಯಕ್ತಿ ತಾನುಂಡ ಋಣವನ್ನು ತೀರಿಸಿದರೆ ಅದೇ ಜೀವನ್ಮುಕ್ತಿ. ತವರು ಮನೆಯ ಋಣಭಾವ ಹೆಣ್ಣಿನ ಮನ ವನ್ನು ಸೂರೆಗೊಂಡಿದೆ; ಅದನ್ನು ಹೇಗೆ ತೀರಿಸಬೇಕೆಂಬ ಬೆರಗು ಕಾಣಿಸಿಕೊಂಡಿದೆ. ಮಗುವಾಗಿ ತಾಯಿಯ ಎದೆ ಹಾಲು ಉಂಡು, ತವರು ಮನೆಯ ಅನ್ನರಸ, ಆನಂದ ರಸಗಳಲ್ಲಿ ಬೆಳೆದ ಹೆಣ್ಣು ಮಗಳು ಪತಿಯ ಮನೆಗೆ ಹೋಗುವಾಗ ಭಾವಪೂರ್ಣ

ವಾಗಿ ಹೀಗೆ ಹಾರೈಸಿ ಹೊರಟಿದ್ದಾಳೆ. ವಿವಾಹ ಜೀವನದಲ್ಲಿಯೂ ತವರು ಮನೆಯ ಪ್ರೇಮ ಅವ್ಯಾಹತವಾಗಿ ಹರಿದು ಕೊಂಡೇ ಬರುತ್ತದೆ. ನೆನಪು ಬಂದಾಗಲೆಲ್ಲ ಅವಳ ಜೀವನದಲ್ಲಿ ಅದು ಬೆಳದಿಂಗಳಂತೆ ಅಮೃತವನ್ನು ಸೂಸುತ್ತದೆ.

ತಂದೀಯ ನೆನೆದರ ತಂಗಳ ಬಿಸಿಯಾಯ್ತು ।
ಗಂಗಾದೇವಿ ನನ್ನ ಹಡದವ್ವ । ನೆನೆದರ
ಮಾಸಿದ ತಲೆಯು ಮಡಿಯಾಯ್ತು ॥

ಮಗಳು ಅನುಭವಿಸಿದ ತಂದೆಯ ಹಿತವಚನಗಳ ಹದವಾದ ಬಿಸಿ ಅವಳ ಬಾಳಿನ ಸಪ್ಪೆಗಳಿಗೆಲ್ಲ ಈಗ ಸಿಹಿಯನ್ನು ತುಂಬುತ್ತದೆ. ತಾಯಿ, ದೇಹ ಬೆಳೆಯಲು ಎದೆಹಾಲು ಅನ್ನವನ್ನಷ್ಟೇ ಕೊಡಲಿಲ್ಲ, ತನ್ನ ಮೈ ಮನಗಳಿಗೆ ಗಂಗೆಯ ಪಾವಿತ್ರ್ಯ ದರ್ಶನ ಮಾಡಿಸುವ ಶುಭ್ರ ಚರಿತ್ರೆಯಾದವಳವಳು. ತಾಯಿ-ಮಕ್ಕಳ ದೈಹಿಕ ಸಂಬಂಧದ ಪ್ರೀತಿ ಇಲ್ಲಿ ಚಿನ್ಮಯ ಪ್ರೇಮಕ್ಕೆ ತಿರುಗಿ ಸಾರ್ಥಕತೆ ಪಡೆದಿದೆ; ಜೀವನ ಮೌಲ್ಯವಾಗಿದೆ. ಇಂಥ ಗರತಿಯ ಜೀವನ ದೃಷ್ಟಿ ಮುಂದೆಲ್ಲಿಯೂ ತಪ್ಪಲಾರದು. ತವರು ಮನೆಯ ಅಗಲಿಕೆಯ ದುಃಖವನ್ನು ಅದುಮಿಕೊಂಡು ತನ್ನ ಬಾಳಿನ ಸೊಗಸಿಗೆ ಟೊಂಕಕಟ್ಟಿ ನಿಲ್ಲುತ್ತಾಳೆ. ಈ ಬಾಳಿನಲ್ಲಿ ಸರಸ-ವಿರಸಗಳ ನೆರಳು-ಬೆಳಕಿನಾಟ ಇನ್ನೂ ಹೆಚ್ಚು. ಸಾಧಕನಿಗೆ ಜೀವನ ರಂಗವು ಪರೀಕ್ಷಾರಂಗವಾಗುವಂತೆ ಸತಿಗೆ ಗೃಹರಂಗ, ಸಮಾಜ ಪರೀಕ್ಷೆಯ ಕಣವಾಗುವದು. ಕೈ ಹಿಡಿದ ಪತಿಯನ್ನು, ಪ್ರೇಮ ವಿಶ್ವಾಸದಿಂದ ಸೇವಿಸಿ, ತನಗೂ ಪ್ರೀತಿ ವಿಶ್ವಾಸಗಳ

ನ್ನೆರೆಯಬೇಕೆಂದು ಆಕೆ ಏಕಾಂತದಲ್ಲಿ ಬೇಡುತ್ತಾಳೆ.

> ಕಟ್ಟ್ಯಾಣಿ ಗುಂಡೀಗೆ ಬಿಟ್ಟು ಮಾಡಲಿ ಬ್ಯಾಡ ।
> ಬಿಟ್ಟು ಬಂದೀದ ಬಳಗೆಲ್ಲ । ಪತಿಪುರುಷ
> ಕಟ್ಟ್ಯಾರ ತಮ್ಮ ಪದರಾಗ ॥

ಮುದ್ದಿನಿಂದ ತವರು ಮನೆಯಲ್ಲಿ ಬೆಳೆದ ನನ್ನನ್ನು ನಿಮ್ಮ ಕೈ ಹಿಡಿಸಿ ಕಳಿಸಿಲ್ಲ, ಪದರಲ್ಲಿ ಹಾಕಿ ಕಳಿಸಿದ್ದಾರೆ ಎಂದು ಹೇಳುವ ದೈನ್ಯಭಾವದಲ್ಲಿ ತನ್ನನ್ನು ತಾನು ಸಂಪೂರ್ಣವಾಗಿ ಪತಿಗೆ ಒಪ್ಪಿಸಿಕೊಂಡು ಬಿಟ್ಟಿರುವ ಸತಿಭಾವ ಸೊಗಸಾಗಿ ಮೂಡಿದೆ. ಆತ ಸತಿಯನ್ನು ಇನ್ನು ಹಾಲಲ್ಲಾದರೂ ಅದ್ದಲಿ, ನೀರಲ್ಲಾದರೂ ಅದ್ದಲಿ, ಅವನನ್ನು ನಂಬಿಕೊಂಡಿರುವುದೇ ಧರ್ಮ ಆಕೆಗೆ. ಇಂಥ ಸರ್ವಾರ್ಪಣ ಭಾವದ ಸತಿಯನ್ನೂ ವಿಷದ ಗಳಿಗೆಗಳು ಗೋಳಿಡಿಸಲು ಕಾದಿರುತ್ತವೆ. ಆದರೆ ಸತಿ ಮಾತ್ರ ಇವುಗಳಿಗೆ ಜಗ್ಗದೆ, ತನ್ನ ಜಾಣ್ಮೆ, ಶ್ರದ್ಧೆಗಳಿಂದ, ಸಿಹಿ ಮಾತುಗಳಿಂದ ನೋವನ್ನು ದೂರ ಮಾಡಲು ಪ್ರಯತ್ನಿಸುವಳು.

> ಗಂಡ ಪಂಡಿತರಾಯ ರಂಡೀಯ ಮಾಡಿದರ ।
> ಬಂಡ ಮಾಡುವರ ಮಗಳಲ್ಲ । ಕೊರಳಾನ
> ಗುಂಡು ಬೇಡಿದರ ಕೊಡುವೇನ ॥

ಗಂಡ 'ಪಂಡಿತರಾಯ' [ ರಸಿಕ ಪಂಡಿತನಾಗಿರಬಹುದು! ] ರಂಡೀಯ ಮಾಡಿದರೆ ಹೆಂಡತಿಗೆ ನೋವಾಗುವುದಿಲ್ಲವೆಂದಲ್ಲ. ಅವಳು ಕಲ್ಲಲ್ಲ, ಮನುಷ್ಯಳೇ. ಆದರೆ ಗುಲ್ಲೆಬ್ಬಿಸಿ, ಹಟಮಾಂ

ತನಕ್ಕೆ ತೆಕ್ಕೆ ಬಿದ್ದು ಜೀವನದ ಸೊಗಸನ್ನು ಹಾಳು ಮಾಡಿಕೊಳ್ಳುವುದರಲ್ಲೇನಿದೆ? ಗರತಿಯ ಮುಗ್ಧ ಪತಿ ಭಕ್ತಿ ಗಂಡನ ದುರ್ಗುಣಗಳನ್ನು ತೀರ ಒರೆಗೆ ಹಚ್ಚಿ ತಿಕ್ಕುವ ಕರ್ಕಶತೆಯ ಪರಿಯದಲ್ಲ; ತಾಳ್ಮೆ, ಸರಸಗಳಿಂದ ತಿದ್ದ ಬಯಸುವ ಮೃದು ರೂಪದ್ದು. ಪತಿಯ ಮುಂದೆ ಗರತಿ ಪ್ರಶ್ನೆಗಳನ್ನೇ ಮರೆಯುತ್ತಾಳೆ. ಇದೇ ಗರತಿ ನೀತಿಯನ್ನು ಬೋಧಿಸುವಾಗ 'ಸೂಳೆಗೆ ಹೋದವ ನಾಯಾದ, ಕಾಡುಕಪಿಯಾದ ಕಡೆಗೆ ಅವಳ ಕಾಲಿಗೆ ಕೆರವಾದ' ಎಂದು ತುಚ್ಛೀಕರಿಸಿ ಮಾತನಾಡಿದವಳು, ನೀತಿಯನ್ನು ನಡೆಸುವ ಪ್ರಶ್ನೆ ಬಂದಾಗ ತನ್ನನ್ನು ಸುಧಾರಿಸಿಕೊಳ್ಳಬಯಸುತ್ತಾಳೆ. ಗಂಡ ಸೂಳೆಗೆ ಬೇಕೆಂದರೆ ಕೊರಳಿನ ಗುಂಡಿನ ಸರವನ್ನು ಕೊಡಲು ಸಿದ್ಧವಾಗುವಳು. ಸತಿಯ ಈ ಶ್ರದ್ಧೆ, ಸಹನೆಗಳೇ ಪತಿಯನ್ನು, ಸತಿಯನ್ನು ಕಾಯಬೇಕು! ಹೆಣ್ಣಿನ ಪವಿತ್ರಮಯ, ತ್ಯಾಗಪೂರ್ಣ ಪ್ರೇಮದ ಬೆಲೆ ಗೊತ್ತಿರದ ಗಂಡಿಗೆ ಅವಳ ಕತ್ತಿನಲ್ಲಿಯ ಗುಂಡಿನ ಸರವೇ ಸಾಕು! ಸ್ತ್ರೀ ಮಾತ್ರ ತನ್ನ ಧರ್ಮವನ್ನು ರಕ್ಷಿಸಿಕೊಳ್ಳಲು ಹರಿತ ಖಡ್ಗಧಾರೆಯ ಮೇಲೆ ನಡೆಯಲೂ ಸಿದ್ಧ. ಆದರೆ ಗಂಡು ಹೆಣ್ಣಿಗೆ ಪ್ರತಿಯಾಗಿ ಇದೇ ಬಗೆಯ ಪುರುಷ ನೀತಿಯನ್ನು ಮೆರೆಯದಿರುವುದೇ ಹೆಣ್ಣಿನ ಮರುಕ! ಸುದೈವದಿಂದ ಸುಗಣ ಪತಿ ದೊರಕಿದಾಗ ಗರತಿಯ ಜಾಣ್ನ ಹರುಷ ಹೇಳತೀರದು.

ಹಚ್ಚಡದ ಪದರಾಗ ಅಚ್ಚಮಲ್ಲಿಗಿ ಹೂವು।
ಬಿಚ್ಚಿ ನನ ಮೇಲೆ ಒಗೆವಂಥ। ರಾಯರನ
ಬಿಟ್ಟ್ಹ್ಯಾಂಗ ಬಾಲಿ ಹಡದವ್ವ ॥

ಪತಿಯ ಪ್ರೀತಿ ಹೆಣ್ಣಿಗೆ, ತಾಯಿ-ತವರಿನ ನೆಚ್ಚನ್ನು ಮರೆಯಿಸಿ ತನ್ಮಯತೆಯ ಹುಚ್ಚು ಹಿಡಿಸಿದೆ. ಇಂಥ ರಾಯರನ್ನು ಬಿಟ್ಟು ಬರಲು ಮನಸ್ಸಾಗದು ಎಂದು ಕರೆಯ ಬಂದ ತಾಯಿಗೆ ಉತ್ತರ ಕೊಡುವಳು. 'ಗಂಜಿಯ ಕುಡಿದರೂ ಗಂಡನ ಮನಿ ಲೇಸು' ಎಂದು ಹೇಳುವ ಗರತಿಗೆ ಹಚ್ಚಡದ ಪದರಲ್ಲಿ ತಂದು ಅಚ್ಚ ಮಲ್ಲಿಗೆ ಹೂವು ಸುರಿಯುವ ಪತಿ ಬಾಳ ಸರ್ವಸ್ವ. ಒಳಿತಿರಲಿ, ಕೆಡಕಿರಲಿ ಎರಡನ್ನೂ ಸಮಭಾವದಿಂದ ಕಾಣುವ ಹೆಣ್ಣಿನ ಹಿರಿಮೆ ಅಗಾಧವಾದುದು.

ಕೆಲ ದಿನಗಳಲ್ಲಿಯೆ ತನ್ನ ದಾಂಪತ್ಯ ಜೀವನಕ್ಕೆ ಸಾರ್ಥಕತೆ ಮೂಡುವಂತೆ ಸಂತಾನ ಭಾಗ್ಯ ಪ್ರಾಪ್ತವಾಗುವದು. ಆಗ ಆಕೆಯ ಹರುಷ ಉಕ್ಕೇರುತ್ತದೆ. ಕಂದನ ವಿವಿಧ ಲೀಲೆಗಳನ್ನು ಕಂಡು, ಅವನ ರೂಪವನ್ನು ದರ್ಶಿಸಿ ಮಹದಾನಂದಗೊಂಡು ಬಗೆಬಗೆಯ ಹಾಡಿನ ಲಾಲಿಯ ಮೂಲಕ ಕಂದನನ್ನು ಓಲೈಸುವ ಆನಂದಾನುಭವವನ್ನು ಸವಿಯ ಬೇಕಾದರೆ ಜನಪದ ಕಾವ್ಯಕ್ಕೇ ಬರಬೇಕೆನ್ನಿಸುತ್ತದೆ ಮನಸ್ಸು.

ಆಡಿ ಬಾ ಕಂದಯ್ಯ ಅಂಗಾಲ ತೊಳದೇನ ।
ತೆಂಗಿನಕಾಯಿ ಎಳನೀರ । ತಕ್ಕೊಂಡು
ಬಂಗಾರ ಪಾದ ತೊಳದೇನ ॥

ಧೂಳಿಯಲ್ಲಾಡಿ ಬಂದ ಕಂದಯ್ಯನ ಪಾದ ಅವಳ ಪಾಲಿಗೆ ಬಂಗಾರ ಪಾದ. ಆ ಪಾದಗಳನ್ನು ತೊಳೆಯಲು ತೆಂಗಿನಕಾಯ ತಿಳಿನೀರು. ಇನ್ನು ಹೊಟ್ಟೆ ತುಂಬಿಸಲು ಬರುವುದೆಂಥ ಅಮೃತ

ರಳನಾಗಿರಬಹುದು ! ತಾಯಿಗೆ ಗಂಡು–ಹೆಣ್ಣು ಎರಡೂ ಸಂತಾನ ಬೇಕು. ಅವರಲ್ಲಿಯೂ ಹೆಣ್ಣು ಸಂತಾನವಿರದಿದ್ದರೆ ತನ್ನ ತಾಯ್ತನ ಬಂಜೆಯೆಂದೇ ಆಕೆಯ ಭಾವನೆ.

ಹತ್ತು ಗಂಡ್ಹಡೆದರೂ ಮತ್ತೆ ಬಂಜೆಬೂರು ।
ದಟ್ಟಿಯ ಉಡುವ ಧರಣಿಯು । ಹಡೆದರ
ಹೆತ್ತ ತಾಯೆಂದು ಕರೆದಾರು ॥

ಸಂತಾನದಾಶೆಯಲ್ಲಿ ಹೆಣ್ಣಿಗೇ ಏಕೆ ಇಂಥ ಪ್ರಾಶಸ್ತ್ಯ. ವರ ದಕ್ಷಿಣೆಯನ್ನು ಕೊಡುವಾಗ ಉಂಟಾಗುವ ಉರಿಯನ್ನು ನೆನೆದು ತಂದೆ. ಹೆಣ್ಣು ಮನೆಗೆ ಹುಣ್ಣು ಹುಟ್ಟಿದಂತೆ ಎಂದು ಉಸಿರ್ಗರೆದಿರಬಹುದು. ಆದರೆ ತಾಯಿಯ ದೃಷ್ಟಿ ಈ ಲೌಕಿಕದ ಲಾಭ–ಹಾನಿಗಳನ್ನು ನೆನೆಯದೆ ಹೆಣ್ಣಿನ ಪರಮ ಶಕ್ತಿಯನ್ನು ನೆನೆದು ಹೆಣ್ಣು ಬೇಕೆಂದು ಬಾಳಿನಲ್ಲಿ ಬಯಸಿದೆ. ಅವಳ ದೃಷ್ಟಿಯಲ್ಲಿ ಹೆಣ್ಣು ಬಾಳ ಪರಂಪರೆಯನ್ನು ಅಖಂಡವಾಗಿ ಸಾಗಿಸಿಕೊಂಡು ಹೋಗುವ ಶಕ್ತಿ ಎಂಬ ಸತ್ಯದ ಬೆಳಕು ತುಂಬಿರುವುದನ್ನು ಗಮನಿಸಬೇಕು. ಹೆಣ್ಣು ಬರಿಯ ಹೆಣ್ಣಲ್ಲ ಧರಣಿ. ಸಕಲ ವಸ್ತುಗಳಿಗೆ ಧರಣಿ ಜನ್ಮ ಕೊಡುವಂತೆ ಹೆಣ್ಣು ಮನುಕುಲಕೆ ಧರಣಿ. ಇಲ್ಲಿ ಹೆಣ್ಣಿನ ಜೀವನಾಧಾರ ಗುಣ ಶಕ್ತಿ, ಸೃಜನಶೀಲ ಶಕ್ತಿಗಳು ಮಹತ್ತಿಗೇರಿ ಧ್ವನಿತನಾಗಿವೆ. ಇಷ್ಟೇ ಅಲ್ಲ ತನ್ನ ಮರಣದ ಕಾಲದಲ್ಲಿ ಹೃದಯ ತುಂಬಿದ ಅಳು ಮಗಳಿಂದಲೇ ದೊರೆಯಬಲ್ಲುದೆಂದು ತಾಯಿ ನಿರೀಕ್ಷಿಸಿದ ಪರಿ ತುಂಬ ಹೃದ್ಯವಾಗಿದೆ.

ಹೆಣ್ಣಲ್ಲದವ್ವನ ಹೆಣ ಚೆಂದವಿಲ್ಲವು ।
ಬಣ್ಣದ ನಿರಿಯ ಸೊಸೆದಿರು । ತೀಡಿದರ
ಕಣ್ಣ ಕಾಡಿಗಿ ಉಲಚವ ॥

ಬಣ್ಣದ ಸೀರೆಯುಟ್ಟುಕೊಂಡು ನೀರಿಗೆಗಳನ್ನು ಹಿಡಿದುಕೊಂಡು ಗಂಟಲಿನಿಂದ ಹೊರಗೇ ಅಳುವಂಥ ಸೊಸೆಯಂದಿರು, ಅತ್ತರೂ ಅವರ ಕಣ್ಣ ಕಾಡಿಗೆ ತೊಳೆದಿರುವುದಿಲ್ಲ. ಹಡೆದವ್ವನ ಸಾವಿನ ಕೊರಗನ್ನು ಹೊಟ್ಟೆಯ ಮಗಳೇ ಅರಿಯ ಬಲ್ಲಳಂತೆ. ತಾಯಿಯ ಈ ಮಾತಿನಲ್ಲಿ, ಈ ಆಶೆಯಲ್ಲಿ ಸತ್ಯದ ಹುರುಳಿಲ್ಲವೆ ?

ನಮ್ಮ ಗರತಿಯ ದೃಷ್ಟಿಯಲ್ಲಿ ಬಂಜೆತನ, ವೈಧವ್ಯ, ಮಾನಹಾನಿ ಹೆಣ್ಣಿನ ಜೀವನಕ್ಕೆ ಬರಸಿಡಿಲುಗಳು. ಈ ಸಂಕಟಗಳ ಆಳವನ್ನು ಊಹಿಸಲೂ ಸಾಧ್ಯವಿಲ್ಲವೆಂಬಂತೆ ಆಕೆ ಹೃದಯವಿದ್ರಾವಕವಾಗಿ ಹಾಡಿರುವುದೇ ಇದಕ್ಕೆ ನಿದರ್ಶನ.

ಬಂಜೆ ಬಾಗಿಲ ಮುಂದ ಬಂಗಾರದೊಳಕಲ್ಲು ।
ಬಂದು ಕುಟ್ಟ್ಯಾಳ ಸೊಸೆಯಿಲ್ಲ । ಮಾನಾವಿ
ಬನ್ನಿ ಮುಡಿಯಾಕ ಮಗನಿಲ್ಲ ॥

ಒಂದರ ಕೊರತೆ, ಕೊರತೆಯ ಸರಮಾಲೆಯನ್ನೇ ಸೃಷ್ಟಿಸುತ್ತದೆ. ಒಂದು ಸೌಭಾಗ್ಯ ಹಲವಾರು ಸೌಭಾಗ್ಯಗಳ ತವರುಮನೆ. ಅದೇ ಸಂತಾನ ಸೌಭಾಗ್ಯ. ಬಂಗಾರದೊಳಕಲ್ಲು ಸಿರಿಯ ಸೌಭಾಗ್ಯವಾದರೂ ಇದು ಯಾವ ಆನಂದವನ್ನು ಕೊಡದು,

ತಿರುಗಿ ದುಃಖವನ್ನು ಇನ್ನೂ ಹೆಚ್ಚಿಸುತ್ತದೆ ಸಿರಿಯನ್ನು ಜೀವಂತಗೊಳಿಸಬೇಕಾದರೆ ಮಗ ಬೇಕು. ಮಗನು ಮಾನಾಮಿಯ ಬನ್ನಿಯನ್ನು ತಾಯಿಗೆ ಕೊಟ್ಟು ಕಾಲಿಗೆರಗಿ ಅವಳಿಗೆ ಸಂತೋಷ ಉಂಟು ಮಾಡುವುದಂತೂ ಇರಲಿ, ಅವನ ಕಾರಣವಾಗಿ ಮನೆಗೆ ಸೊಸೆ ಬರುವಳು. ಮನೆಯು ಸಮಸ್ತ ವಸ್ತುಗಳಿಗೆ ಜೀವಕಳೆ ಆಗ ಬರುವದು. ಇಲ್ಲದಿದ್ದರೆ ಆ ಭಾಗ್ಯವೆಲ್ಲಿ? ಜೀವನವೇ ಮರಳುಗಾಡು ಆಕೆಯ ಪಾಲಿಗೆ. ಈ ಮರುಭೂಮಿಯು ಕೊರಗನ್ನು ತರಬೇಡವೆಂದೇ ಅವಳು ಹಗಲಿರುಳು ದೇವರನ್ನು ಪ್ರಾರ್ಥಿಸುತ್ತಿರುತ್ತಾಳೆ.

**ಕಂದನ ಕೊಡು ಶಿವನೆ ಬಂಧನ ಬಡಲಾರೆ ।**
**ಹಂಗೀನ ಬಾನ ಉಣಲಾರೆ । ಮರ್ತ್ಯದಾಗ**
**ಬಂಜೆಂಬ ಶಬುದ ಹೊರಲಾರೆ ॥**

ಅಪುತ್ರಸ್ಯ ಗತಿರ್ನಾಸ್ತಿ, ಎಂಬ ಶಾಸ್ತ್ರದ ಮಾತು ಬಹುಶಃ ಅವಳನ್ನಲ್ಲಿ ಹೆದರಿಸಿಲ್ಲವೆಂದು ಕಾಣುತ್ತದೆ ಸ್ವಾನುಭವದ ವೇದವೇ ಅವಳಾಗಿರುವಾಗ ಬಂಜೆಯ ನೋವನ್ನು ಬೇರೆಯವರು ಹೇಳಬೇಕೇ ಆಕೆಗೆ? ಮಕ್ಕಳಿಲ್ಲದೆ ಬಾಳಿನಲ್ಲಿ ಎಷ್ಟೋ ಜನ ಹೆಣ್ಣುಗಳು ಹೇಗೆ ಪರಿತಪಿಸುತ್ತಿದ್ದಾರೆ, ಪರಿತಪಿಸಿದ್ದಾರೆ ಎನ್ನುವ ಇರಿತ ಅವಳನ್ನು ಕಂಗೆಡಿಸಿದೆ. ಹೊರಗಿರುವ ಆ ಉರಿ ತನ್ನನ್ನೇ ಸುತ್ತಿಕೊಂಡರೆ ಅವಳ ದುರ್ದೆಶೆ ಹೇಳತೀರದು. ಬಂಜೆ ಎಂಬ ದುರಿತ ಬಂಧನದಿಂದ ಪಾರಾಗಬೇಕೆಂದು, ಕಂದನನ್ನು ಬೇಡಿ ಪರಶಿವನಲ್ಲಿ ಗೋಳಿಟ್ಟಿದ್ದಾಳೆ ಹೆಣ್ಣು! ಮಕ್ಕಳ

ಸುಖ ಮಾತೆಗೇ ಗೊತ್ತು ! ಜೊತೆಗೆ ಮಕ್ಕಳನ್ನು ಪಡೆಯುದ ತಾಯಿ ಸ್ತ್ರೀ ಹಿರಿಮೆಗೆ ಕಲಂಕ ತಂದಂತೆ ಎಂಬ ಕರುಳಿರಿಯುವ ಕಟು ಸತ್ಯ ಅವಳ ದೃಷ್ಟಿಯಲ್ಲಿ ದಿಟ.

> ಹೆಣ್ಣು ಆಗುವದಕಿಂತ ಮಣ್ಣು ಆಗುವದು ಲೇಸು ।
> ಮಣ್ಣಿನ ಮೇಲೆ ಮರವಾಗಿ । ಬೆಳದರ
> ಬಂದವರಿಗೆಲ್ಲ ನೆರಳವ್ವ ॥

ಬಂಜೆ ಹೆಣ್ಣಾಗುವುದಕ್ಕಿಂತ ಮಣ್ಣಾಗಿದ್ದರೇ ಲೇಸಾಗಿತ್ತು. ಮಣ್ಣು ಗಿಡ-ಮರಗಳಿಗೆ ಜನ್ಮ ಕೊಟ್ಟು, ಲೋಕದ ಜನರಿಗೆ ತಂಪಿನ ನೆರಳನ್ನಾದರೂ ಕೊಡುವುದಕ್ಕೆ ಕಾರಣವಾಗುತ್ತದೆ. ಬಂಜೆಯಿಂದ ಲೋಕಕ್ಕೆ ಬಂದ ಭಾಗ್ಯವೇನು ? ಎಂಬುದೇ ಗರತಿಯ ಕೊರಗು. ಇಲ್ಲಿಯ ನೋವಿನ ಆಳವನ್ನು ಯಾರೂ ಅರಿಯರು! ಪತಿ-ಪುತ್ರರಿಂದೊಡಗೂಡಿ. ಅತ್ತೆ. ಮಾವ, ಭಾವ, ಮೈದುನ. ನಾದಿನಿಯರೊಂದಿಗೆ ಬಾಳಿನ ಸುಖ ಸವಿದು ಸರಿಕದವರಲ್ಲಿ ಸೈ ಎನಿಸಿಕೊಂಡು ಹೃದಯಾನಂದ ಭರಿತಳಾಗುವುದಕ್ಕಿಂತ ಹೆಚ್ಚಿನ ಸುಖ ಅವಳಿಗೆ ಬೇರೊಂದಿಲ್ಲ

ಹೆಣ್ಣಿನ ಜೀವನದಲ್ಲಿ ಇನ್ನೂ ಹೃದಯವಿದ್ರಾವಕ ಪ್ರಸಂಗ ಪತಿ ವಿಯೋಗ ಗಂಡನನ್ನು ಕಳೆದುಕೊಂಡರೆ ಅವಳ ಸರ್ವಸ್ವ ಶೂನ್ಯ. 'ಕೋರಿಯ ಹೊತ್ತರೂ. ಕೂಲಿಯ ಮಾಡಿದ' ಪತಿ ಅವಳಿಗೆ ಪರ ದೈವ. ದುಡ್ಡು ಬೇಡ. ಗದ್ದೆ ತೋಟ ಬೇಡ, ಮುತ್ತೈದೆತನವೊಂದಿದ್ದರೆ ಸಾಕು, ಅವಳಿಗೆ ಎಲ್ಲ ಇದ್ದಂತೆ.

ಅಂಗಯ್ಯ ಒಳಗೀನ ಲಿಂಗ ಮೂರುತಿ ಸ್ವಾಮಿ ।
ಮಂಗಳಾರೂತಿ ನಾ ಬೆಳಗಿ । ಬೇಡುವೆನು
ಮಾರಾಯರ ಮುಂದ ಮರಣವ ॥

'ಮಾರಾಯರ ಮುಂದೆ ಮರಣ' ಅವಳು ಜೀವನದಲ್ಲಿ ಬೇಡುವ ಪರಮ ಧನ್ಯತೆ. ತಾಯಿಯ ವಿಯೋಗಕ್ಕೆ ಅವಳು ತತ್ತರಿಸುವಳು. ಬಂಜೆಯ ನಂಜಿನಿಂದ ಕೊರಗುತ್ತ ಬಾಳ ನೂಕುವಳು. ಆದರೆ ತನ್ನ ಮುಂದೆಯೇ ಪತಿಯ ಸಾವು ಎನ್ನುವುದನ್ನು ಕೇಳಲಿಕ್ಕೂ ಆಕೆ ಉಳಿಯಲಾರಳು ಪತಿಯೊಡನೆ ಸಹಗಮನ ಮಾಡಿ ಮಹಾಸತಿಯಾಗಿ ಬೆಳೆದು. ಜನಗೌರವವನ್ನು ಪಡೆದು ನಿಲ್ಲುವ ಧೀರತ್ವ ಅವಳದು. ಕನ್ನಡ ಜನಪದದಲ್ಲಿ ಇಂಥ ಕತೆಗಳಿಗೆ ಕೊರತೆಯಿಲ್ಲ ಮಹಾಸತಿಯ ಕಲ್ಲುಗಳು ಇದಕ್ಕೆ ಸಾಕ್ಷಿ. 'ಈರೋಬಿ', ಗೊಲ್ಲರ ನಾಗವ್ವನ ಕಥೆಗಳು * ಗಂಡನನ್ನು ಕಳೆದುಕೊಂಡ ಹೆಣ್ಣಿನ ಅಳಲನ್ನು, ತೀರ್ಮಾನವನ್ನು ಕರುಳು ಕರುಗುವಂತೆ ಚಿತ್ರಿಸುತ್ತವೆ. ಗೊಲ್ಲರ ನಾಗವ್ವ ಎಳೆವರೆಯದ ಬಾಲೆ. ಚಿಂದಯ್ಯನಿಗೆ ಆಕೆಯನ್ನು ಕೊಟ್ಟು ಲಗ್ನ ನಿಶ್ಚಯವಾಗಿ ಎಣ್ಣೆ ಹಚ್ಚುವ ಕಾರ್ಯವೂ ಪ್ರಾರಂಭವಾಗಿರುತ್ತದೆ. ಅದೇ ಸಮಯದಲ್ಲಿ ಬೇಡರು ಚಿಂದಯ್ಯನ ಆಡುಗಳನ್ನು ಕದ್ದ ಸಮಾಚಾರ ಬರುವುದು. ಬೇಡರೊಡನ ಕಾದಾಡಿ ಆಡುಗಳನ್ನು ಬಿಡಿಸಿಕೊಂಡು ಬರಹೋದ ಗಂಡ ಚಿಂದಯ್ಯ ಮೋಸಕ್ಕೆ ತುತ್ತಾಗಿ ಮರಣವನ್ನಪ್ಪಿದ. ಈ ದಾರುಣ ವಾರ್ತೆಯನ್ನು ಕೇಳಿದ ಎಳೆ ಬಾಲೆ ನಾಗವ್ವ ಗಂಡನ ಚಿತೆಯೊಡನೆ ಚಿತೆಯೇರಿ

---

* ಜನಪದ ಸಾಹಿತ್ಯ ಸಮೀಕ್ಷೆ (ಪುಟ. ೧೪೩)— ಜೀಶಂಪ.

ಸಾಯುಲು ನಿರ್ಧರಿಸುವಳು. ಅವಳ ನಿರ್ಧಾರವನ್ನು ಯಾರೂ ಕದಲಿಸಲಿಕ್ಕೆ ಸಾಧ್ಯವಾಗುವುದಿಲ್ಲ. ತವರುಮನೆಯಿಂದ ತಂದೆ ತಾಯಿಗಳು ಓಡಿ ಬಂದು 'ಸಾವಿರ ಕೊಟ್ಟೇವು' ಇರು ಮಗಳೆ ಎಂದು ಗೋಗರೆದರೂ ನಾಗವ್ವ ತಾಯಿಯ ಮಾತನ್ನು ಧಿಕ್ಕರಿಸಿದಳು. ಪತಿಯ ಬೆಲೆ ಪತಿಯೇ. ಅವನಿಗೆ ಸಮಾನವಾದುದು ಪ್ರಪಂಚದಲ್ಲಿ ಯಾವುದೂ ಇಲ್ಲ ಎನ್ನುವ ಸ್ತ್ರೀ ನೀತಿಯನ್ನು ನಾಗವ್ವ ಸ್ಪಷ್ಟವಾಗಿ ನುಡಿಯುತ್ತಾಳೆ, ನಡೆಯುತ್ತಾಳೆ.

ಸಾವಿರ ಕೊಟ್ಟರೆ ನನ್ನ ಕೊಪ್ಪಿನ ಬೆಲೆಯಿಲ್ಲ ।
ಅತ್ತೆಯ ಮಗನೆ ಚಿಂದಯ್ಯ । ನಾ ಕುಟ್ಟಿ
ನಾ ಹತ್ತೋದೆ ಲೇಸು ಒಡಗಿಚ್ಚ ॥

ತವರುಮನೆಯು ಸಾವಿರ ಈಗ ಪತಿ ಕೊಟ್ಟ ಒಂದು ಆಭರಣ [ಕೊಪ್ಪು] ಕ್ಕೂ ಸಮಾನವಲ್ಲ. ಇನ್ನು ಪತಿಯ ಜೀವಕ್ಕೇನು ಸಮನಾಗಬಲ್ಲುದು. ? ನಾಗವ್ವ ತನ್ನ ಪತಿಯ ಚಿತೆಯಲ್ಲಿಯೇ ಹಾರಿ ಮಹಾಸತಿಯಾಗುವಳು. ತಾಯಿಯನ್ನು ಗಂಗಾದೇವಿಗೆ, ಕಾಶಿಗೆ ಹೋಲಿಸಿ ಹಾಡಿದ ಹೆಣ್ಣಿನ ಭಾವಪೂರ್ಣ ಹೃದಯವೂ ವಜ್ರಕಠೋರವಾಗಿ ನಿಲ್ಲುತ್ತದೆ ಪತಿಯನ್ನು ಮರೆದು ಬಾಳು ಎಂದು ಹೇಳುವ ನುಡಿಗೆ. ಮಗಳ ದುಃಖವನ್ನು ಉಂಡ ತಾಯಿಯ ಮನ ಮರುಗಿರಬಹುದು. ಆದರೆ ಮಹಾಸತಿಯಾದ ಮಗಳ ಗುಣದ ಹಿರಿಮೆ ಮಾತ್ರ ನಿಸ್ಸಂಶಯವಾಗಿ ಮಾತೆಯ ಹೃದಯಕ್ಕೆ ಹೆಮ್ಮೆಯನ್ನು, ಅಭಿಮಾನಕ್ಕೆ ಕೋಡನ್ನು ಮೂಡಿಸದೆ ಬಿಡುವುದಿಲ್ಲ. ಬಾಳಿನಲ್ಲಿ ಲೌಕಿಕ

ದುಃಖವನ್ನು ಬದಿಗಿರಿಸಿ ನೋಡಿದರೆ ಇಂಥ ಮಹಾಸತಿಯರ ಹಿರಿಮೆಯು ದರ್ಶನ ಬದುಕಿಗೆ ಸಿಕ್ಕುವುದು.

ಹೀಗೆಯೇ ಜನೋಪಕಾರಕ್ಕಾಗಿ ತನ್ನ ದೇಹವನ್ನು ಕೆರೆಗೆ ಹಾರವಾಗಿ ಕೊಟ್ಟ ಭಾಗೀರತಿಯ ಬಲಿದಾನದ ಕಥನ ಗೀತ ಸುಪ್ರಸಿದ್ಧವಾಗಿದೆ. ಸಾಮಾಜಿಕ ನೀತಿ, ನಾಡ ಪ್ರೀತಿ. ಲೋಕದ ಕ್ಷೇಮ ಚಿಂತನೆಗಳಿಗಾಗಿ ಹೆಣ್ಣು ಆತ್ಮಾರ್ಪಣೆ ಗೈದ ಬಂಧುರ ನಿದರ್ಶನಗಳು ಜನಪದ ಕಾವ್ಯದಲ್ಲಿ ಮಾರ್ಮಿಕವಾಗಿ ಮೂಡಿ ಬಂದು ಓದುಗರ ಮೈ-ಮನಗಳಿಗೆ ರೋಮಾಂಚನವುಂಟು ಮಾಡುತ್ತವೆ. ಇದು ಸತಿಯರ 'ದಿವ್ಯ ಹುಚ್ಚು'. ಈ ಜಾಡನ್ನು ಹಿಡಿದು ಸಾಗಿದರೆ ನಮ್ಮ ಗರತಿಯರ ಜೀವನದ ಪರಿ, ಪರಮ ಗುರಿ ಎಂಥದು ಯಾವುದು ಎಂಬುದು ನಮಗೆ ಸ್ಪಷ್ಟವಾಗಿ ಗೊತ್ತಾಗುವುದು.

ಈ ಪ್ರಸಂಗದಲ್ಲಿ ಹಿಂದೀ ಸಾಹಿತ್ಯದ ಸುಪ್ರಸಿದ್ಧ ಕವಿ ಮೈಥಿಲಿ ಶರಣ ಗುಪ್ತರು, ನಾರಿಯ ಜೀವನವನ್ನು. ಅವಳ ಹಿರಿಮೆಯನ್ನು ಕುರಿತು. 'ಯಶೋಧರ' ಎಂಬ ಕೃತಿಯ ಆರಂಭದಲ್ಲಿ ಹೇಳುವ "ನಾರೀ ಜೀವನ ಹಾಯ್ ತುಮ್ಹಾರೀ ಯಹೀ ಕಹಾನಿ | ಆಂಚಲಮೆ ದೂಧ ಔರ್ ಆಂಖೋಮೆ ಪಾನಿ" ಎಂಬ ಭಾವಪೂರ್ಣ ಸಾಲುಗಳು ಸ್ಮರಣೆಗೆ ಬರು ತ್ತವೆ. ಊರ್ಮಿಳೆ. ಸೀತೆಯರ ದುಃಖ ತ್ಯಾಗಗಳಿಗಿಂತ ಯಶೋಧರೆಯ ದುಃಖ. ತ್ಯಾಗಗಳ ಕಥೆ ಉಜ್ವಲ, ಹೃದಯ ದ್ರಾವಕ. ಅವರಿಬ್ಬರಿಗೂ ಜೀವನದಲ್ಲಿ. (ಕೆಲವು ವರ್ಷಗಳನ್ನು

ಬಿಟ್ಟರೆ) ಪತಿ ಸೌಭಾಗ್ಯವಾದರೂ ಇತ್ತು. ಆದರೆ ಯಶೋಧರೆ ಆ ಭಾಗ್ಯವನ್ನೂ ತ್ಯಾಗ ಮಾಡಿದ ದಿವ್ಯ ವ್ಯಕ್ತಿ. ಗೌತಮನು ಭಗವಾನ್ ಬುದ್ಧನಾಗಿ ಬಿಕ್ಷೆಗೆ ಬಂದಾಗ ಮಹಾಸತಿ ಯಶೋಧರಾ ತನ್ನ ಪ್ರೇಮದ ಫಲವಾದ ಮಗು ರಾಹುಲನನ್ನೆ ಭಗವಾನನಿಗರ್ಪಿಸಿ ಕೃತಕೃತ್ಯಳಾದಳು. ಜಗದ ಅಳಲನ್ನು ಕಳೆಯಲು ಹೆಣ್ಣು ಹೀಗೆ ತನ್ನ ಅಳಲನ್ನು ಸೈರಿಸಿದೆ; ಶಾಂತಿ ಬೀರಿ ಮಾನವ ಕುಲವನ್ನು ಉದ್ಧರಿಸಿದೆ.

ನಮ್ಮ ನಾಡಿನ ಗರತಿಯ ಶೀಲ. ಸ್ವಭಾವ, ಆಶೋತ್ತರಗಳನ್ನು ಸಮಾಜ ನೀತಿಯ ಒರೆಗಲ್ಲಿಗೆ ಹಚ್ಚಿ ತಿಕ್ಕಿದರೆ ಕೆಲವೊಂದು ಸಲ, ಕೆಲವರಿಗೆ ಅವು ಬಹು ವಿಚಿತ್ರವಾಗಿ ಕಾಣಿಸಬಹುದು. ಈ ಹೆಣ್ಣಿನ ತನ್ನವೇ ಆದ ವಿಶಿಷ್ಟ ನಿಷ್ಠೆ-ನಂಬಿಕೆಗಳು, ಬಯಕೆ-ಭಾವನೆಗಳು ಜಗದ ಕಣ್ಣಲ್ಲಿ ಸೋಜಿಗವೆನ್ನಿಸುವುದು ಅಸಾಧ್ಯವೇನಲ್ಲ. ಕೆಲವರ ದೃಷ್ಟಿಯಲ್ಲಿ ವಿಚಿತ್ರ, ಹುಚ್ಚು-ನಚ್ಚು ಎನ್ನಿಸಬಹುದಾದಂಥ ವ್ಯಕ್ತಿತ್ವದ ಹೊಳಹುಗಳೇ ಭಾರತೀಯ ಗರತಿಯ ವೈಶಿಷ್ಟ್ಯಗಳು.

---

# ೮. ಹಾಸ್ಯ ಬಾಳಿಗೆ ಹಾಸ

ಆನಂದ, ಹಾಸ್ಯಗಳು ಜನಪದ ಜೀವನದಲ್ಲಿ ಹಾ
ಹೊಕ್ಕಾಗಿ ಬೆರೆತಿರುವುದು ಕಂಡು ಬರುತ್ತದೆ. ಜೀವನ
ಯಾವ ರಂಗದಲ್ಲಿಯೂ ಅವರು ಬಾಳ ಶಕ್ತಿಯಾದ ನಗೆಯನ್ನ
ಮರೆತಿಲ್ಲ ಹಾಗೆ ಹಾಸ್ಯ, ಸಂತೋಷ ವಿರಹಿತರಾಗಿ ಬಾಳಿದ್ದ
ಅವರಿಗೆ ಬಾಳನ್ನು ಕುರಿತು ರಸವತ್ತಾಗಿ ಹಾಡುವುದು ಸಾಧ್ಯವಿ
ಲಿಲ್ಲ. ಅಂತರಂಗದಲ್ಲಿ ಆನಂದವಿರದಿದ್ದರೆ ಹಾಡು ಮೂ
ವುದು ಸಾಧ್ಯವಿಲ್ಲ ಗಂಡು-ಹೆಣ್ಣು ಸಮಾನವಾಗಿ ದುಡಿಯುತ್ತ
ಆನಂದದಿಂದ ಹಾಡುತ್ತ ಕೆಲಸದ ದಣಿವನ್ನು ಕಡಮೆ ಮಾ
ಕೊಂಡಿರುವರು. ನಗುನಗುತ್ತ ಬಾಳಿನಲ್ಲಿ ಯೌವನಿಗರಾಗಿ ಬ
ಸೌಖ್ಯವನ್ನು ಹೊಂದಿದ್ದಾರೆ. ಅವರ ಆನಂದ ಕೆಲಸದೊಡನೆ
ತಾದಾತ್ಮ್ಯ ಭಾವದಿಂದ ಆರಂಭಗೊಂಡು ಬ್ರಹ್ಮಾನಂದದ
ಯನ್ನು ತಲುಪುತ್ತದೆ ಕೆಲವೊಂದು ಸಲ. ಲೌಕಿಕ ಜೀವನ
ಹಾಸ್ಯ ಬಾಳ ಹಸುರನ್ನು ಹೆಚ್ಚಿಸುತ್ತ ತನ್ನ ಬೃಹದ್ದರ್ಶನವ
ಮಾಡಿಸಿದಾಗ ನಗೆ ಯಾರಿಗೆ ಬೇಡ? ಎನ್ನಿಸುತ್ತದೆ.
ಯಿರುವಲ್ಲೆಲ್ಲ ನೈಜ ಜೀವನವಿರುತ್ತದೆ ಎಂದು ಹೇಳಬಹು
ಇದರ ವ್ಯಾಪಕತೆ ನೇಗಿಲಯೋಗಿಯಿಂದ ಪ್ರಾರಂಭವಾಗಿ
ಯೋಗಿಯ ವರೆಗೂ ಎಂದು ನಂಬಿದರೆ ಅತಿಶಯೋಕ್ತಿಯಲ್ಲ.

ದೇವರುಗಳಿಗೆ ವಾಹನ, ರೂಪಗಳನ್ನು ಕೊಡುವು
ಹಿನ್ನೆಲೆ ಏನೇ ಇದ್ದರೂ, ಶಿವನಿಗೆ ಮುದಿ ಎತ್ತು, ಮ

ಾಯುದ ಗಣಪತಿಗೆ ಆನೆ ಮೊಗ, ಇಲಿದೇರು; ಯಮನಿಗೆ ೋಣ. ಹನುಮನಿಗೆ ಬಾಲ, ಕೋಡಗೆ ಮುಖ, ವಿಷ್ಣುವಿಗೆ ರುಡ ಇಂಥ ಕಲ್ಪನೆಯ ವೈಖರಿಯಲ್ಲಿಯೂ ಹಾಸ್ಯ, ಕೌತುಕ ಳ ಮೆರುಗು ಕೂಡಿಕೊಂಡಿದೆ ಎಂದೆನಿಸುತ್ತದೆ. ಇದು ್ರಾಣಕಾರರ, ದಾರ್ಶನಿಕರ ಮಾತಾದರೆ ಜನಪದ ಕವಿಗಳು ಹ ಇದಕ್ಕೆ ಹೊರತಾಗಿಲ್ಲ. ಮ ದು ವೆ ಯ ಹಾಡುಗಳಲ್ಲಿ, ೋಳಿಯಾಟ-ಕೋಲಾಟದ ಪದಗಳಲ್ಲಿ, ಗಂಡ-ಹೆಂಡಿರ ರಸ ಸಲ್ಲಾಪದ ಅವಧಿಯಲ್ಲಿ, ಮಕ್ಕಳ ಗೀತಗಳಲ್ಲಿ, · ಜಗಳಾ ಟದ ಪ್ರಸಂಗದಲ್ಲಿ; ಮೈಗಳ್ಳ, ಹೊಟ್ಟೆಬಾಕ, ಜೀನ ಇವರ ಗುಣ ಾನದಲ್ಲಿ, ಕೆಲವೊಂದು ಸಲ ದೇವರನ್ನು ಕುರಿತಾದ ಹಾಡಿನ ಡೆತಗಿನಲ್ಲಿ ನಾನಾ ಬಗೆಯ ನಗುವಿನ ತೆರೆಗಳು ಚಿಮ್ಮುತ್ತ ರುವುದನ್ನು ಅನುಭವಿಸುವೆವು. ಈ ನಗೆಯ ಹಾಡುಗಳಲ್ಲಿ ನೋದ, ಸರಸ, ಹೃದಯ ಸಂಸ್ಕಾರ, ವಿಡಂಬನೆ, ಆತ್ಮಾ ಂದ ಮೊದಲಾದ ಗುಣಗಳೆಲ್ಲ ಬೆರೆತುಕೊಂಡು ನಮ್ಮಸ್ನೊ ಗೆಯ ಏರಿಳಿತದಲ್ಲಿ ತೂಗುತ್ತಿರುತ್ತವೆ.

**ಸಣ್ಣ ನಾವ ದ ರಂಗ ಸುಣ್ಣಕ್ಕೆ ಬರುತಾನೆ।**
**ಸನ್ನೆ ಬಲ್ಲ ಹೆಣ್ಣ ಒಳಗಿರೆ। ರಂಗಯ್ಯ**
**ಸುಣ್ಣಕ್ಕೆ ಬರುವ ಬಗೆ ಬೇರೆ॥**

ುಣ್ಣದ ನೆಪದಲ್ಲಿ ನೆರೆ ಮನೆಯ ಸುಂದರ ಬಾ ಲೆ ಯ ನ್ನು ಾಣುವ, ಮಾತನಾಡಿಸುವ ತವಕದಲ್ಲಿರುವ ಬೆಡಗಿನ ತರುಣ

ನನ್ನು ಸಣ್ಣ ನಾಮದ ರಂಗ ಎಂದು ಕರೆದಿರುವಲ್ಲಿ ವರ್ಣನೆಯ
ರಂಜಕತೆಗಿಂತ ಅವನ ಗುಣದ ಡೊಂಕನ್ನು ತೋರುವ ನವುರು
ವ್ಯಂಗ್ಯವನ್ನೇ ಗುರುತಿಸಬೇಕು. ನವುರಾದ ವ್ಯಂಗ್ಯ ಹಾಸ್ಯದಲ್ಲಿ
ಗರತಿಯೊಬ್ಬಳು ಎರಡು ಗುರಿಗಳನ್ನು ಸಾಧಿಸಿದ್ದಾಳೆ- ಒಂದು
ಹೆಣ್ಣಿನ ಮಾನ ರಕ್ಷಣೆ; ಇನ್ನೊಂದು ಕಟಕಿಯಿಂದ ರಂಗನ
ಗುಣ ಪರಿವರ್ತನೆ.

ಒಬ್ಬ ಸತಿ ತನ್ನ ಪತಿರಾಯನು ಇನ್ನೊಂದು ಹೆಣ್ಣಿನ
ಹವ್ಯಾಸವನ್ನು ಹಚ್ಚಿಕೊಂಡು ಬಹುಕೃತ ವೇಷ ಧರಿಸಿ ತಿರು
ಗಾಡುವುದನ್ನು ಸರಸ ಹಾಸ್ಯದಿಂದ ವಿವರಿಸುತ್ತಾಳೆ—

ಹಗಲು ಹಾರುವನಾದ ಇರುಳು ಬಣಜಿಗನಾದ।
ಅರಸು ಮಗನಾಗಿ ತಿರುಗಿದ । ನಮ್ಮ ರಾಯ
ನರಸಿಪುರದೋರ ಮಗಳಿಗೆ ॥

ಇವನು ತೊಡುವ ವೇಷಗಳೆಷ್ಟು ! ಹಾರುವ, ಬಣಜಿಗ, ಅರಸು
ಮಗ ಇಂತು ರೂಪಧಾರಣ ಮಾಡಿಕೊಂಡು ಹಗಲಿರುಳೆನ್ನದೆ
ಓರಂತೆ ಎಡತಾಕಿದ ರಾಯರ ವ್ಯಾಪಾರ ಗಿಟ್ಟಿತೋ ಹೇಗೋ
ಹೇಳಲಿಕ್ಕಾಗದು! ಈ ಪ್ರಯತ್ನ ಸಾಗಿರುವಾಗಲೆ ಸತಿಯು
ಮಾಡುವ, ಗುಟ್ಟಿನ ರಟ್ಟು ಮಾತ್ರ ಗಂಡನನ್ನು ದಿಗಿಲು ಹಿ
ಸುವುದು; ಕಣ್ಣು ತೆರೆಯಿಸಲೂ ಬಹುದು.

ಮೈಗಳ್ಳನೂ ಉಂಡಾಡಿ ಗುಂಡನೂ ಆದ ಪತಿಯನ್ನು
ಕಟ್ಟಿಕೊಂಡು ಸರಸವಾಗಿ ದಿನ ನೂಕುತ್ತಿರುವ ಸತಿಯ ಗಿ

ಕೊರತೆಯಿಲ್ಲ ಬಾಳಿನಲ್ಲಿ. ಒಂದು ದಿನ ಇಂಥ ಹೆಣ್ಣೊಬ್ಬಳು ತನ್ನ ಪತಿಯನ್ನು ಕಾಣದೆ, ಇಂಥ ಗುರುತಿನ ನನ್ನ ಗಂಡ ನನ್ನು ಕಂಡಿದ್ದೀರಾ ಎಂದು ಜನರನ್ನು ಕೇಳುತ್ತಿರುವುದರ ಮೋಜು ಸ್ವಾರಸ್ಯಪೂರ್ಣವಾಗಿದೆ.

ಗಂಡನ ಕಾಣಿರೊ ಗೆಂಡ್ಡೊಟ್ಟಿ ಮರುವಾನ ।
ಉಂಡೇಳು ಮನೆಯ ರುಗೊತೀನ । ಗಂಡಯ್ಯನ
ಕೊಂಡ್ಹೋದರು ನಿನ್ನೆ ಬರದಲ್ಲಿ ॥

ಈ ಗಂಡು ಉಣ್ಣದೆ ಹೊರ ಹೊರಡುವವನಲ್ಲ; ಮತ್ತೆ ಉಂಡು ಕೆಲಸ ಹಿಡಿಯುವವನೂ ಅಲ್ಲ. ಇವನ ದಿನಚರಿ ಉಂಡು, ಮನೆಯನ್ನೇ ಮರೆತು ಹತ್ತಾರು ಮನೆಗಳನ್ನು ಸುಮ್ಮನೇ ಸುತ್ತು ಹಾಕಿಕೊಂಡು ಬರುವುದು. ಇಂಥ ಗಂಡನ್ನು ಯಾರೋ ಕೊಂಡು ಹೋದರು ಬರದಲ್ಲಿ ಎಂದು ಇನ್ನೊಬ್ಬ ಹೆಣ್ಣು ಅಷ್ಟೇ ಹಾಸ್ಯವಾಗಿ ಉತ್ತರ ಕೊಡುವದೂ ಹಾಸ್ಯಪೂರ್ಣವಾಗಿದೆ. ಗಂಡುಗಳೇ ಹೀಗಿರುವುದಲ್ಲ. ಕೆಲವೊಂದು ಸಲ ಹಸಗೇಡಿ ಹೆಣ್ಣು ಗಳೂ ರಸಿಕರ ಕಣ್ಣಿಗೆ ಸಿಕ್ಕು, ರಸದೌತಣವಾಗುವುದು ಓದುಗರಿಗೆ.

ತಿಂದೋಡಿ ನಿನ ಗಂಡ ತಿಂದೇನು ಮಾಡಂದ ।
ತಿಂದೇಳು ಮನೆಯ ತಿರುಗಂದ । ಉಟ್ಟ ಸೀರೆ
ಉಂಗಟಕ ಹಾಕಿ ಹರಿಯೆಂದ ॥

ಕೆಲಸ ಬೇಕಾದಷ್ಟಿದ್ದರೂ ತಿಂದು ತಿರುಗುವ ಸ್ವಭಾವದ ಹೆಣ್ಣಿಗೆ ಯಾವ ಕೆಲಸ ಹೇಳಬೇಕು ಜಾಣ ಪತಿ. ಅವನು

ಹೇಳಬಹುದಾದ ಕೆಲಸವನ್ನು ರಸಿಕ ಹೆಣ್ಣೊಬ್ಬಳು ಹೇಳಿಬಿ ಬಿಡುತ್ತಾಳೆ, ಉಟ್ಟ ಸೀರೆ ಉಂಗಟಕ ಹಾಕಿ ಹರಿವ ಮೋಜಿನ ಕೆಲಸವನ್ನು. ತಿಂದೋಡಿ ಹೆಣ್ಣು ನಾಚಿಕೆಪಟ್ಟುಕೊಂಡು ತಲೆ ತಗ್ಗಿಸಿ ಇಲ್ಲಿಂದ ನಾಳೆ ಕಿತ್ತಿರಬೇಕು! ಸೋಮಾರಿ ಗಂಡು ತಿಳಿಗೇಡಿ ಹೆಣ್ಣು ಸಮಾಜದಲ್ಲಿ ಲಭ್ಯ. ಅವರು ರಸಿಕ ಜನಕ್ಕೆ ಸೊಗಸಿನ ಬುಗ್ಗೆ. ಹಗುರು ಹಾಸ್ಯದಿಂದ ಅವರನ್ನು ಆಡಿಕೊಳ್ಳುತ್ತ, ಹಾಡಿನ ಹಾಸ್ಯದಲ್ಲಿಯೆ ನೀತಿ, ಸಂಸ್ಕೃತಿ ಯನ್ನು ವಿವರಿಸುವ ಕಲೆ ಹಳ್ಳಿಗರಿಗೆ ಸರಿಯಾಗಿ ಒಗ್ಗಿದೆ.

ಅಳಿಯ – ಮಾವರ ಜಗಳವೂ ಜನಕ್ಕೆ ಹೊಸದಲ್ಲ ಆದರೆ ಅತೃಪ್ತಿಯನ್ನು ಹಾಸ್ಯಮಯವಾಗಿ ಹೇಳಿಕೊಂಡು ಸಂಸಾರದಲ್ಲಿ ಸತಿ - ಪತಿಗಳು ಹಿತವಾಗಿರುವುದು ವಿರಳ ಉದಾ ಹರಣೆ. ಇಂಥ ವಿರಳ ಉದಾಹರಣೆಗಳೇ ಅಭಾವ ವೈರಾಗ್ಯ ದಲ್ಲಿ ಸುಖದ ಸುಗ್ಗಿಯನ್ನು ತಂದೀಯುವವು. ಮದುವೆಯ ಕಾಲದಲ್ಲಿ ಮಾವ ಅಳಿಯನಿಗೆ ತಕ್ಕ ಮರ್ಯಾದೆ ಮಾ ದಂತಿಲ್ಲ. ಇದರಿಂದ ಸಹಜವಾಗಿ ಕೋಪಗೊಂಡ ಅಳಿಯ ಮಾವನೊಡನೆ ಜಗಳ ಕಾಯದೆ ಹೆಂಡತಿಯನ್ನು ಮನೆ ಕರೆದುಕೊಂಡು ಬಂದು ವಿನೋದ ಲಹರಿಗಿಳಿಯುತ್ತಾನೆ.

ಜಾಡಿ ಜಮಖಾನೊತ್ತಿ ಕಂಬಳಿಯ ಕರಿವೊತ್ತಿ ।
ಉಂಗುರುಡುದಾರ ಖಡೆಯೊತ್ತಿ । ಸತಿಯಾಳ
ಮುರುವೊತ್ತ ನಿದ್ದಿ ತಿಬಾರದ ॥

ಮಾವ ಉಂಗುರ, ಉಡುದಾರ, ಖಡೆಗಳನ್ನು ಕೊಡುವುದೆ ತ್ತಟ್ಟಗಿರಲಿ ಹಾಸಿಕೊಳ್ಳಲು ಜಾಡಿ, ಜಮಖಾನೆಗಳನ್ನ

ೊಟ್ಟು ಕಳಿಸಿಲ್ಲ. ಈ ಕೋಪದಿಂದ ಗಂಡನೂ ಹೆಂಡತಿಯ
ೖಮೇಲೆ ಯಾವ ವಸ್ತು ಒಡವೆಗಳನ್ನೂ ಹಾಕಲಿಲ್ಲವೆಂದು
ಾಣುತ್ತದೆ. ಈ ಸಿಟ್ಟನ್ನೂ ಸತಿ ಬಹು ಜಾಣ್ಮೆಯಿಂದ ತಾಳಿ
ೊಂಡು ಗಂಡನಿಗೆ ತಕ್ಕದಾದ ಉತ್ತರವನ್ನೆ ಕೊಡುತ್ತಾಳೆ
ುಲಗಿದಲ್ಲಿಂದಲೇ ಸರಿದು.

ಸರಿದು ನಾ ಮಲಗಟಗೆ ಸರಗೀಯ ಕೊಂಡ್ಹೊತ್ತಿ ।
ಕಾಲುಂಗರೊತ್ತಿ ಬಳಿಯೊತ್ತಿ । ರಾಯರ
ನತ್ತೊತ್ತಿ ನಿದ್ದಿ ಬಾರದ ॥

ಯಾವನ ಜೀನತನ ಅಳಿಯನಿಗೆ ನಗೆಯಾಡುವ ವಸ್ತುವಾಗಿದೆ.
ಂಡನ ಸುತ್ತುವರಿದು ಬಂದ ಕೋಪ ಹೆಂಡತಿಗೆ ಸರಸದ
ಾರಣವಾಗಿದೆ. ರಸಿಕ ಗಂಡಿಗೆ ರಸಿಕ ಹೆಣ್ಣು ಜೋಡಿಯಾದರೆ
ೀವನದಲ್ಲಿ ಗೆಲುವನ್ನು ಕೇಳಬೇಕೆ ? ದಾಂಪತ್ಯದಲ್ಲಿ ಇಂಥ
ರಸ ಇಲ್ಲದ್ವರ ನೋವನ್ನು ಬೇರು ಸಹಿತ ಕಿತ್ತೊಗೆದು ಇದೆ
ಂಬ ಭಾವವನ್ನು ಉದ್ದೀಪನಗೊಳಿಸಿ ಬಾಳನ್ನು ಬೆಳಗಿಸು
ತ್ತದೆ. ರಸಿಕತೆಗೆ ಬಡತನ, ಚಿಂತೆ, ಸಿಡುಕುತನ ಬೆಂಗೊಟ್ಟು
ಡುವವು. ಜೀವನದಲ್ಲಿ ಹಣ ಮುಖ್ಯವಲ್ಲ; ಹಾಸ್ಯ ಮುಖ್ಯ
ಎಂಬ ತತ್ವವನ್ನು ಅವರು ಕಂಡವರು.

ಮದುವೆಯ ಪ್ರಸಂಗದಲ್ಲಿ ನಮ್ಮವರ ಆನಂದೋತ್ಸಾಹ
ಗಳು ಗರಿಗೆದರಿ ಕುಣಿದಿವೆ. ಒಂಬತ್ತು ದಿನಗಳ ವರೆಗೆ ಮದು
ವೆಯ ಸಂಭ್ರಮ ನಡೆವ ದಿನಗಳೂ ಇದ್ದವು. ಈ ಸಂಭ್ರಮದ
ಅವಧಿಯಲ್ಲಿ ಬೀಗರು ಒಬ್ಬರನ್ನೊಬ್ಬರು ಆಡಿಕೊಳ್ಳುತ್ತ,

ಹಾಸ್ಯವಾಗಿ ಹಾಡಿಕೊಳ್ಳುತ್ತ ಪಡೆದ ಆನಂದ ನಮಗೀಗ ಕನಸಿನ ಮಾತಾಗುತ್ತಿದೆ. ಬೀಗರ ಸಂವಾದ ರೂಪದ ಹಾಡುಗಳಲ್ಲಿ ವ್ಯಂಗ್ಯ, ಚುರುಕುತನ, ವಿನೋದ ಸಮ್ಮಿಳನಗೊಂಡಿರುವುದನ್ನು ಕಾಣಬೇಕು.

ಚೂರ ಹೋಳಿಗಿ ಚೂಜಿಲೆ ತುಪ್ಪ ।
ಸೂರಿ ಮಾಡ್ಯಾಳವ್ವ ಬೀಗತಿ ।
ನಮ್ಮೂರ ತನಕ ಕೀರತಿ ॥

ಎಂದು ಒಂದು ಪಕ್ಷದವರು ಹಾಸ್ಯರಸದ ಚಿಲುಮೆಯನ್ನು ಚಿಮ್ಮಿಸಿದಾಗ. ಎದುರು ಪಕ್ಷದವರ ಹಾಸ್ಯದುತ್ತರವೂ ಹಾರಿ ಬರುತ್ತದೆ.

ಎಲ್ಲರು ಕಟ್ಟ್ಯಾರ ಗುಳ್ಳೀಬ್ಯಾಳೀ ಮಣಿ ।
ಬೀಗತಿ ಕಟ್ಟ್ಯಾಳ ಕೈಪಾಳಿ । ಅವರಣ್ಣ
ಬಳಸಲಿಕ್ಕಿಲ್ಲಂತ ಕಸಗೊಂಡ ।

ಹೀಗೆಯೇ ಸಂವಾದದ ಕಾವ್ಯ, ಹಾಸ್ಯದ ಏರು ಹೆಚ್ಚುತ್ತ ಹೋಗುತ್ತದೆ.

ಬೀಗತೊಳ್ಳೆವಳಂತ ಅಡಗೀಯು ಮನಿ ಕೊಟ್ಟೆ ।
ದೇವರ ಕದ್ದಾಳ ಬಗಲಾಗ । ಅಡಗಿ ಮನಿಯು
ಹೋಳಿಗಿ ಘಳಗಿ ಬಗಲಾಗ ॥

'ಸರಕ್ಕ ಸರಿತಲ್ಲ ಬೀಗರ ಸರೂಪ ತಿಳಿತಲ್ಲ' ಎಂದು ಹೇಳಿದರೆ ಬಂದ ಬೀಗರು ಸುಮ್ಮನೇ ಬಿಡುವರೆ! ಹಾಸ್ಯದ ಹಿರಿಯ ಗುಂಡನ್ನೆ ಎಸೆಯುವರು ಎದುರು ಪಕ್ಷಕ್ಕೆ.

ಒಂದು ಅಡಕಿ ಒಡದು ಒಂಬತ್ತು ಲಗ್ನಮಾಡಿ ।
ಇಂದೀನ ಖರ್ಚು ಬಲು ಖರ್ಚು । ಎಂದ ಬೀಗ
ಕಂಬದ ತೆಕ್ಕಿ ಬಿಡವೊಲ್ಲ ॥

ಒಂಬತ್ತು ಲಗ್ನಗಳನ್ನು ಒಂದೇ ಅಡಕಿಯಲ್ಲಿ ಮಾಡಿ ಮುಗಿಸಿದ ಬೀಗ ಖರ್ಚು ಬಹಳವಾಯಿತೆಂದು ಬೋರಾಡುತ್ತ ಕಂಬದ ತೆಕ್ಕೆಯನ್ನೇ ಬಿಡಲೊಲ್ಲನಂತೆ. ಹಾಡನ್ನು ಕೇಳಿದವರು ಹೊಟ್ಟೆ ಹುಣ್ಣಾಗುವಂತೆ ನಗುವರು. ಹಾಡು ಹೇಳುತ್ತ, ನಗುತ್ತ ದಣಿಯದೇ ಈ ಸಂಭ್ರಮ ರಾತ್ರಿಯುದ್ದಕ್ಕೂ ಸಾಗುತ್ತಿರುತ್ತದೆ. ಮದುವೆ ನೋಡಲು ಬಂದ ಊರ ಜನರೂ ಈ ನಗೆಯಲ್ಲಿ ಪಾಲ್ಗೊಂಡು ಆನಂದ ಪಡುತ್ತಾರೆ.

ಅಜ್ಜ-ಅಜ್ಜಿಯರ ಲೋಕಕ್ಕೂ ಈ ಹಾಸ್ಯ ತಲೆ ಹಾಕದೆ ಬಿಡುವುದಿಲ್ಲ. ಯುವಕ, ಯುವತಿಯರಿಗೆ ಅವರೊಂದು ಮೋಜು! ಅಜ್ಜ-ಅಜ್ಜಿಯುವರ ಪ್ರೇಮದಾಟವನ್ನು ಎಲ್ಲಿ ಕದ್ದು ನೋಡಿದನೋ ಒಬ್ಬ ರಸಿಕ. ಕಂಡವನೇ ಜನಗಳ ಮುಂದೆ ಹಾಡುತ್ತಾನೆ—

ಮುದುಕೀಗೆ ಮುದುಕನಿಗೆ ಎಲ್ಲೆಲ್ಲಿ ಮಾತಾಯ್ತು ।
ಮುತ್ತುಗದ ಮರದ ಗೆಡ್ಡೇಲಿ । ಮುದುಕಯ್ಯ
ಮುದುಕೀಗೆ ಮುದ್ದ ಕೊಡತಿದ್ದ ॥

ಪಾಪ, ಮನೆಯಲ್ಲಿ ಮಕ್ಕಳು ಮೊಮ್ಮಕ್ಕಳೆಂದು ಹೇಳಿ ಏನೊ ನೆಪ ಮಾಡಿಕೊಂಡು ದೂರ ಬಂದು ಗಿಡದ ಮರೆಯಲ್ಲಿ ಸರಸ

ಸಲ್ಲಾಪಕ್ಕಿಳಿದರೆ ಈ ಮುದುಕರನ್ನು ಇಲ್ಲಿಗೂ ಬಂದು ನೋಡ ಬೇಕ ಘಾಟ ಗಂಡುಗಳು! ಈ ಹಾಡು ಕೇಳಿ ಅಜ್ಜ ಅಜ್ಜಿ ಯರು ಮುಖ ಕೆರಳಿಸಿರಬೇಕು.

ಎಲ್ಲಿಯೋ ಒಂದು ಕಡೆ ಸರಸೆಯರ ಸಮ್ಮೇಳನ ಕೂಡಿದೆ. ಕುಂಬಾರ ಹುಡುಗನೊಬ್ಬ ತಮ್ಮಲ್ಲಿಯ ಸುಂದರ ಗೆಳತಿಯೊ ಬ್ಬಳನ್ನು ಲಗ್ನವಾಗಲು ಬಯಸಿದ ನೆಪ ಮುಂದೆ ಮಾಡಿ ಕೊಂಡು ಅವನ ಗೇಲಿ ಮಾಡಲು ಪ್ರಾರಂಭಿಸಿದ್ದಾರೆ. ಬಹುಶಃ ಗಂಡೂ ಅಲ್ಲಿಯೇ ಇರಬೇಕು.

**ಕುಂಬಾರ ನಿನಗ್ಯಾಕೊ ಗೊಂಬಿ ಮಾಟದ ಹೆಣ್ಣು ।**
**ತುಂಬೆಂದ ಮಣ್ಣು ತುಳಿಯೆಂದ । ಮನೆ ಮನೆಗೆ**
**ಹೊತ್ತು ಮಾರೆಂದ ಹೊಸ ಗಡಿಗೆ ॥**

ಕೆಸರು ತುಳಿದು ಗಡಿಗೆ ಮಾಡಿ ಮಾರುವ ಶ್ರಮಜೀವಿ ಕುಂಬಾ ರನಿಗೆ ಗೊಂಬೆ ಮಾಟದ ಹೆಣ್ಣಿನಿಂದ ಏನು ಪ್ರಯೋಜನ. ಅವನಿಗೆ ಬುದ್ಧಿ ಕಡಮೆಯಾಗಿದ್ದರೆ ಮಾತ್ರ ಚಿತ್ತಾರದಂಥ ಹೆಣ್ಣನ್ನು ಕೈ ಹಿಡಿಯಬೇಕು. ಅಂಥವಳ ಕೈ ಹಿಡಿದರೂ ಇವನು ಕುಂಬಾರನೆ! ಮಣ್ಣು ತುಂಬು, ಕೆಸರು ತುಳಿ, ಗಡಿಗೆ ಹೊರು ಎಂದು ಅವನು ಹೇಳುವವನೆ. ಆವಳು ಮಾಡಬ ಹುದೊ ಇಲ್ಲವೊ ಎನ್ನುವದರ ಕಲ್ಪನೆಯೇ ಅವನಿಗಿರುವುದಿಲ್ಲ. ಇದು ಹಾಸ್ಯಾಸ್ಪದ ಎನ್ನುವುದೇ ಸರಸೆಯರ ವಿಚಾರ. ಮಾಟಾದ ಹೆಣ್ಣಿಗೆ ಮಟ್ಟಸ ಗಂಡ ಸಿಕ್ಕರೆ ಸರಿ. ಗಂಡು ಇಜ್ಜೋಡಾ ದರೆ ಗೆಳತಿಯ ಬಗ್ಗೆ ಇನ್ನುಳಿದವರಿಗೆ ಮರುಕ. ಗಂಡನ ಬಗ್ಗೆ ಎಲ್ಲಿಲ್ಲದ ಬೇಸರ. ಆ ಬೇಸರವೇ ಹೀಗೆ ಹಾಡಾಗುತ್ತದೆ.

ಒಳ್ಳೆಯ ಅಡಕಿಗೆ ಎಲ್ಲಿತ್ತೊ ಕರಗೆಲೆ।
ನೆಲ್ಲಿಕಾಯ್ನಂತ ಬಟುವಾನ। ಹೆಣ್ಣಿಗೆ
ಎಲ್ಲಿದ್ದ್ಯೊ ಜೋಗಿ ಪರದೇಶಿ

ಸುಂದರವೂ, ಕೋಮಲವೂ ಆದ ಹೆಣ್ಣು ಕುರೂಪಿಯ ಕೈ ಹಿಡಿದಾಗ ಕಸವಿಸಿಗೊಂಡು ಖಾರವಾಗಿಯೇ ಹಾಸ್ಯ ಮಾಡಿದ್ದಾರೆ ಸರಸ ಗೆಳತಿಯರು. ಹೇಗಿದ್ದರೂ ಗಂಡಿನ ಮೂಗೇ ಮೇಲಾಗಬೇಕೆಂಬ ಸಮಾಜದ ವಾದವನ್ನಿವರು ಅನುಮಾನಿಸದೆ ವಿನೋದವಾಗಿ ಖಂಡಿಸಿದ್ದಾರೆ. ಉದ್ದ–ಗಿಡ್ಡಗಳನ್ನವರು ಸಹಿಸಿಕೊಂಡಿದ್ದಾರೆ; ಹಾಸ್ಯವಾಗಿಯೂ ಹಾಡಿದ್ದಾರೆ. ಅವರ ದೃಷ್ಟಿಯಲ್ಲಿ "ಗಿಡ್ಡರು ನಡೆದರೆ ಗಿಳಿ ಹಿಂಡು ನಡೆದ್ಹಾಂಗ; ಉದ್ದನ ಬಾಲಿ ತಂಗಿ ನಡೆದರೆ ರುದ್ದರನ ತೇರು ಎಳೆದ್ಹಾಂಗ" ಗಿಡ್ಡರನ್ನು ಹೊಗಳುತ್ತ ಉದ್ದನ್ನ ತಂಗಿಯನ್ನೂ ರುದ್ದರನ ತೇರಿಗೆ ಹೋಲಿಸಿಕೊಂಡಿರುವ ಜಾಣ್ಮೆ ಮೆಚ್ಚುವಂತಹದು. ರಸಿಕತೆಯ ದೃಷ್ಟಿಗೆ, ಹಾಸ್ಯದ ಸೆಳವಿಗೆ ಸಿಕ್ಕರೆ ಉದ್ದ, ಗಿಡ್ಡ, ಸರಾಸರಿ ಎಲ್ಲವೂ ಸೊಗಸು!

ತನ್ನ ಶೀಲದ ಬಗ್ಗೆ ಭರವಸೆ ಇಲ್ಲದ ಅನುಮಾನದ ಪ್ರಾಣಿ ಗಂಡನೊಡನೆ ಒಬ್ಬ ಶೀಲವಂತೆ ಸಂವಾದಿಸುವ ಚಿತ್ರವೂ ಸರಸ ಸುಂದರವಾದುದು. "ಮಾತಾಡು ಮಾತಾಡು ಮಲ್ಲಿಗೆ! ನಾನಿಲ್ಲದಿದ್ದಾಗ ನೀನೇನ ಮಾಡಿದೆ" ಎಂದು ಅವನ ಪ್ರಶ್ನೆ ಪ್ರಾರಂಭವಾದರೆ ಗರತಿಯ ಉತ್ತರವೂ ತಡಮಾಡದೇ ಬರುತ್ತದೆ.

ಒಬ್ಬನ್ನ ಕಟ್ಟಿದ್ದೆ ಒಬ್ಬನ್ನ ಬಿಟ್ಟಿದ್ದೆ।
ಒಬ್ಬನ ಕರಕೊಂಡು ಒಳಗ್ಹೋದೆ । ಮಲ್ಲಿಗೆ

ಗಂಡ ಗಾಬರಿಯಾದ. ಅವನ ನಾಲಗೆ ಗಡಬಡಿಸುತ್ತಾ ಕೇಳುತ್ತದೆ.

ಯಾವನ್ನ ಕಟ್ಟಿದ್ದೆ? ಯಾರನ್ನ ಬಿಟ್ಟಿದ್ದೆ?।
ಯಾವನ್ನ ಕರಕೊಂಡು ಒಳಗ್ಹೋದೆ । ಮಲ್ಲಿಗೆ

ಗಂಡಿನ ಮರುಳುತನವನ್ನರಿತು ಮನದಲ್ಲಿಯೆ ಮುಸು ಮುಸು ನಕ್ಕಿರಬೇಕು ರಸಿಕ ಶೀಲವಂತೆ. ಗಂಡನನ್ನು ಹೆಚ್ಚಿಗೆ ಕಕ್ಕಾವಿಕ್ಕಿಗೊಳಿಸಬಾರದೆಂದು ನೆನೆದು ಉತ್ತರವನ್ನು ಕೊಟ್ಟೇ ಬಿಡುತ್ತಾಳೆ.

ಹಸುವನ್ನು ಕಟ್ಟಿದ್ದೆ ಕರವನ್ನು ಬಿಟ್ಟಿದ್ದೆ।
ಹಾಲ ಕರಕೊಂಡು ಒಳಗ್ಹೋದೆ । ಮಲ್ಲಿಗೆ

ಗಂಡನೂ ತನ್ನ ಮರುಳುತನಕ್ಕೆ ತಾನೇ ನಾಚಿ ನಕ್ಕಿರಬೇಕು. ಇಂಥ ರಸಿಕ ಹೆಣ್ಣು ನಿತ್ಯವೂ ಜೀವನಕ್ಕೆ ಯೌವನವನ್ನು ತುಂಬುವಾಕೆ

ಚಿಕ್ಕ ಮಕ್ಕಳೂ ಆಟವಾಡುವಾಗ ಹಾಸ್ಯ ರಸದ ಚಿಮ್ಮುಕನ್ನು ಹೊಡೆಯುತ್ತ ನೋಡುವವರನ್ನು ಹರುಷಗೊಳಿಸುವರು. ಎದುರು–ಬದುರಾಗಿ ಕುಳಿತುಕೊಂಡ ಹುಡಿಗೆಯರಲ್ಲಿ ಒಬ್ಬಳು 'ಅಂಗಡ್ಯಾಗ ಕಸಕಸಿ, ಗಂಡಾ ಹೆಣ್ತಿ ಖುಸಿ ಖುಸಿ' ಎಂದು ಅನ್ನುತ್ತ ತುಸು ದೂರದಲ್ಲಿರುವ ಹುಡಿಗೆಯ ಹತ್ತಿರ ಬಂದು ತಿರುಗುವಳು. ಈ ಹುಡಿಗೆಯೂ

ಅಡಕಲ ಗೆಡಗ್ಯಾಗ ಆಡುನ ಬಾ ।
ನಿಬ್ಬಣ ಬಂದೈತೆ ನೋಡುನು । ಬಾ

ಎಂದು ಹೇಳುತ್ತ ಹಾಗೆಯೇ ಕಪ್ಪೆಯಂತೆ ಜಿಗಿಯುತ್ತ ಬರುವಳು. ಒಂದೊಂದು ಸಲ ಇಂಥ ಆಟದ ಕಿರುನುಡಿಗಳಲ್ಲಿ ಕಟಕಿಯು ಮೊನಚೂ ತುಂಬಿಕೊಂಡಿರುತ್ತದೆ. ಗಂಡು ಹುಡುಗರು ಮನೆಗೆ ಬಂದ ಮಾವನನ್ನು ಹಾಸ್ಯ ಮಾಡುತ್ತ, 'ಮಾವಾ ಮಾವಾ ಮಾತಾಡು, ಮಾವಿನ ಗಿಡಕೆ ಜೋತಾಡು........' ಎಂದು ಹಾಡಿ ಕುಣಿದಾಡುವರು.

ಜನಪದ ರಸಿಕರು ದೇವರನ್ನು ಹಾಸ್ಯ ಮಾಡದೆ ಬಿಟ್ಟಿಲ್ಲ. ಶಿವನು ಚಾಮುಂಡಿಯ ಮನೆಗೆ ಕದ್ದು ಹೋದುದನ್ನು; ಹನುಮಂತ ತನ್ನ ಆಭರಣಗಳನ್ನು ಕಳ್ಳರು ಕಿತ್ತುಕೊಂಡು ಹೋದರೂ ಉದ್ದ ಮೋರೆ ಮಾಡಿಕೊಂಡು ಸುಮ್ಮನೆ ಇರುವುದನ್ನು ಕಂಡು ಸರಸವಾಡಿರುವಂತೆ, ನಾರದನ ಚಾಡಿಗುಣವನ್ನು, ಚೆಲುವ ರಂಗಯ್ಯನ ಸರಸವನ್ನು ಕುರಿತು ಹಾಸ್ಯ ಮಾಡಿದ್ದಾರೆ. ಈ ಹಾಸ್ಯದ ಪ್ರಸಂಗದಲ್ಲಿಯೂ ದೇವಮಹಿಮೆಯು ಸೆನಹೇ ಅವರಲ್ಲಿ ತುಂಬಿಕೊಂಡು ಕುಣಿಯುತ್ತಿರುವುದು. ರಸಿಕರ ನಗೆಯಾಟ, ಸರಸ ಯಾರ ಮನವನ್ನೂ ನೋಯಿಸಲಾರದು. ನಗೆಯಾಡುವಾಗ ಅದರಲ್ಲಿರುವುದು ಪರಿಶುದ್ಧ ಹಾಸ್ಯರಸವೇ ಹೊರತು ಮತ್ಸರದ ಹೊಗೆಯಲ್ಲ. ಇಂಥ ಸರಸವೇ ಜೀವನಕ್ಕೆ ನೆಮ್ಮದಿ, ಗಂಡು – ಹೆಣ್ಣಿಗೆ ಯೌವನದ ಜೀವಕಳೆ ತಂದುಕೊಡುವುದು. " In cheerful souls

there is no evil " ಎಂಬ ಕಾರ್ಲೈಲ್‌ನ ಮಾತು ಸತ್ಯ

ನಗೆ ಜೀವನದಲ್ಲಿ ಮನುಷ್ಯನಿಗೆ ಸಿಕ್ಕ ದೊಡ್ಡ ವರ. ಅದ ಜೀವನದ ಜಾಡ್ಯ, ಜಡತೆಗಳನ್ನು, ಕಷ್ಟ - ಕಾರ್ಪಣ್ಯಗಳ ಕರಾ ಛಾಯೆಯನ್ನು ಹರಿದೊಗೆಯುವ ಹೊಂಬಿಸಿಲು. ಆತ್ಮಕ ಬಲವನ್ನೂ, ಮೈ-ಮನಗಳಿಗೆ ಆರೋಗ್ಯ ಭಾಗ್ಯವನ್ನೂ ತಂದ ಕೊಡುವ ನಗೆಯನ್ನು ಮಾನವ ದೇವನಿಂದ ಬೇಡಿ ಪಡೆಯಬೇ ಕೆಂದು ಶ್ರೀ ಡಿ. ವಿ. ಜಿ. ಯವರು ಕರೆಯಿತ್ತಿದ್ದಾರೆ-

* ನಗುವು ಸಹಜದ ಧರ್ಮ; ನಗಿಸುವುದು ಪರಧರ್ಮ।
ನಗುವ ಕೇಳುತ ನಗುವುದತಿಶಯದ ಧರ್ಮ।
ನಗುವ ನಗಿಸುವ ನಗಿಸಿ ನಗುತ ಬಾಳುವ ವರವ
ಮಿಗೆ ನೀನು ಬೇಡಿಕೊಳೊ--ಮಂಕುತಿಮ್ಮ ॥

---

* ಮಂಕುತಿಮ್ಮನ ಕಗ್ಗ; ಪದ್ಯ—೯೧೭.

# ೮. ಸೌಂದರ್ಯ ಸಿದ್ಧಿ

ಕಲಾದೃಷ್ಟಿ, ಸಂವೇದನಾಶೀಲ ಗುಣವಿಲ್ಲದೆ ರಸಾನುಭವ, ಸೌಂದರ್ಯದ ಅರಿವು ಮೂಡುವದು ಅಸಾಧ್ಯ. ಕವಿಯೊ, ಶಿಲ್ಪಕಲಾದಿ ಕಲೆಗಾರರೊ ಪ್ರಪಂಚದ ವಸ್ತುಗಳ ರೂಪ, ರುಚಿ, ಗೇಯುತೆಗಳಿಂದ ಮರುಳುಗೊಳ್ಳುವರು. ಹೊರಗಣ್ಣಿಗೆ ಸಿಕ್ಕಬಲ್ಲ ವಸ್ತುಗಳ ಈ ರೂಪದರ್ಶನ ಸಾಮಾನ್ಯನಿಗೂ ಅನುಭವ ಮಾಡಿಸುವದು. ಇಲ್ಲಿಯ ವರೆಗಿನ ಅನುಭವದಲ್ಲಿ ಕವಿಯೂ ಸಾಮಾನ್ಯನೂ ಒಂದೇ ಮಟ್ಟದವರೆಂದು ಹೇಳಬಹುದು. ಆದರೆ ಕವಿಯ ಹಾಗೂ ಇನ್ನುಳಿದ ಕಲೆಗಾರರ ಅಂತರಂಗವನ್ನು ಸೇರಿದ ಅನುಭವ ಲೌಕಿಕಾನಂದದ ಬಂಧನವನ್ನು ಹರಿದುಕೊಂಡು ಅದರೊಡನೆ ಸಮರಸಗೊಂಡು, ಪ್ರತಿಭೆಯ ಪ್ರಭಾವದಿಂದ ಶಬ್ದರೂಪದ ಕಾವ್ಯವಾಗಿಯೊ, ಶಿಲ್ಪ, ಚಿತ್ರ, ನರ್ತನಾದಿ ಕಲೆಗಳ ರೂಪದಲ್ಲಿಯೋ ಹೊರಬರುವುದು. ಹೀಗೆ ಆವಿರ್ಭವಿಸಿದ ಕಲಾಸೃಷ್ಟಿ ತನ್ನ ಅಜರಾಮರ ಮಧುರ ಗುಣದಿಂದ ಜನಮನವನ್ನು ಸೂರೆಗೊಂಡು ಶಾಶ್ವತವಾಗಿ ಬಾಳುತ್ತದೆ; ಬದುಕಿಗೆ ಮಾರ್ಗದರ್ಶಕವಾಗುತ್ತದೆ. ಈ ಕಲಾಸೃಷ್ಟಿಯ ರಸಾನುಭವದ ಮಟ್ಟದಲ್ಲಿ ಹುಟ್ಟು, ಸಾವು, ಕರುಣೆ. ಕ್ರೋಧ, ಹಾಸ್ಯ, ವೀರ, ಶೃಂಗಾರ ಮೊದಲಾದ ಸನ್ನಿವೇಶಗಳೆಲ್ಲ ಸಮಾನ ಗುಣವುಳ್ಳವುಗಳಾಗಿ ಕಾಣುವವು. ನಮಗೆ ಸಾವು ಅಹಿತ; ಆದರೆ ಕವಿಯ ಸತ್ಯಾನುಭವದ ಸುಂದರ ದೃಷ್ಟಿಯಲ್ಲದು ಆತ್ಮನು ಪರಮಾತ್ಮ

ನೊಂದಿಗೆ ಬೆರೆಯಲು ನಿಂತ ಮಂಗಲದ ಮಹಾಗಳಿಗೆ! ತಾಯಿಯ ಮೊಲೆಹಾಲು ಸಾಮಾನ್ಯ ತಿಳುವಳಿಕೆಗೆ ಮಗುವಿನ ಹೊಟ್ಟೆ ತುಂಬಿಸುವ ರಸ; ಆದರೆ ಕವಿಯ ದೃಷ್ಟಿಯಲ್ಲದು ಮಂಗಳ ವೈಯಲ್ಲಿ ಪಿಯೂಷವಾಗಿ ಹರಿದು 'ಗಂಗಾದೇವಿ ನನ್ನ ಹಡದವ್ವ ನೆನೆದರ ಮಾಸಿದ ತಲೆಯು ಮಡಿಯಾಯ್ತು' ಎಂಬ ಪವಿತ್ರ ದೃಷ್ಟಿಯನ್ನು ಆಕೆಯಲ್ಲಿ ತೆರೆಯ ಹಚ್ಚುವ, ಧನ್ಯತೆಯ ಪರಮ ಶಕ್ತಿ.

ಜನಪದ ಕಾವ್ಯದಲ್ಲಿ ಅನೇಕ ಕಡೆಗೆ ವ್ಯಕ್ತವಾಗಿರುವ ಇಂಥ ಚೆಲುವಿನರ್ಥದ ಹರಹು, ಸೌಂದರ್ಯದೆತ್ತರ ನಮ್ಮನ್ನು ರಸೋದಧಿಯಲ್ಲಿ ತೇಲಿಸಿ ತನ್ಮಯಗೊಳಿಸುತ್ತದೆ. ಪಂಚೇಂದ್ರಿಯ ತಲಸ್ಪರ್ಶಿಯಾಗಿ ಉಗಮವಾಗುವ ಅವರ ಜೀವನ ರಸಾನುಭವ, ಅನುಭವದ ಆಳಕ್ಕಿಳಿದು, ಪ್ರತಿಭೆಯಲ್ಲಿ ಪಲ್ಲವಿಸಿ ಶಿವದೆತ್ತರ ಕ್ಕೇರಿ ನಿಂತು, ಲೋಕಾನುಭವ ದೂರವಾದ ಅನಂತ ಸೌಂದ ರ್ಯದ ದರ್ಶನ ಮಾಡಿಸಿ 'ಸತ್ಯಂ - ಶಿವಂ - ಸುಂದರಂ' ಆಗಿ ಕಾಣುವುದು. ಜೀವನದ ವಿಭಿನ್ನ ಪರಿಸರದಲ್ಲವರು ಹೀಗೆ ಕಂಡ ಬಾಳ ಬೆಳಕಿನ ಹೊನಲಿಗಿಷ್ಟು ಇಳಿಯೋಣ!

ಏಳೆಲೆ ಮಾವಿನ ತಾಳಿನಲ್ಲಿರುವೋಳೆ ।
ತಾಳದ ಗತಿಗೆ ನಲಿಯೋಳೆ । ಸರಸೋತಿ
ನಾಲಿಗೆಗಕ್ಷರವ ಕಲಿಸವ್ವ ॥

ಹೃದಯದಲ್ಲಿ ಮೂಡಿದ ಭಾವಗಳನ್ನು ಹೊರಗೆ ಹಾಕಲು ಯುಕ್ತ ಶಬ್ದ ಶಕ್ತಿ ಬೇಕು. ಶಬ್ದವನ್ನು ನುಡಿವ ಚೇತನೆ

ಯನ್ನು ನಾಲಗೆಗೆ ಸರಸ್ವತಿ ಕರುಣಿಸಬೇಕೆಂದು ಪ್ರಾರ್ಥಿಸುವ ಬೇಡಿಕೆಯ ಹಿಂದೆ, ವಾಣಿಯು ಅರುಹಿನ ಬೆಳಕು, ಅವಳ ಕೋಮಲ ಭಾವ, ಲಯಗತಿಗಳ ಸೊಗಸಿನ ದರ್ಶನ ಕವಿಗಾಗಿರುವುದು ಮುಖ್ಯವಾಗಿದೆ. ದೃಷ್ಟಿ ವಿಶುದ್ಧಿ ಸ ಮ ನಿ ಸಿ ದಾ ಗ ಸೌಂದರ್ಯಾನುಭವ ವಿಸ್ತಾರವಾಗುತ್ತ ಹೋ ಗು ವು ದು; ನುಡಿಯ ಮೋಡಿ ಬೆಡಗು, ಭವ್ಯತೆಗಳನ್ನು ಮೂಡಿಸುತ್ತ ಸಾಗುವುದು.

ಇಂದು ನನ್ನಂಗವ ಶ್ರೀಗಂಧ ನಾತಾವ ।
ಬಂದಿದಾನೇನ ಶ್ರೀಹರಿ । ನನ ಮನೆಗೆ
ಗಂಧದ ಮಡುವ ಕಲಕೂತ ॥

ಹರಿಯ ಕೃಪೆ ಬಂದರೆ ಹರಿದು ಹೆದ್ದೊರೆ ಬಂದಂತೆ ಓತಪ್ರೋತ. ಜೀವಿಯ ಮನೆ, ಮನ ಎಲ್ಲ ಶ್ರೀಗಂಧಮಯ. ಏಕೆಂದರೆ ಅವನು ತರುವುದು ಕಡದ ಶ್ರೀಗಂಧವಲ್ಲ; ಶ್ರೀಗಂಧವೇ ಅವನು, ಅವನೇ ಶ್ರೀಗಂಧ. ಅವನ ಬರುವಿಕೆ ಗಂಧದ ಮಡುವಿನ ಕಲಕಾಟ. ಈ ಶಕ್ತಿಯ ದರ್ಶನಾನುಭವ, ಸ್ಪರ್ಶಾನುಭವ. ನುಡಿಯನುಭವ ಎಲ್ಲವೂ ಪರಿಮಳ ಪೂರ್ಣ.

ಬಿತ್ತೀದ ಹೊಲದಾಗ ಒತ್ತೆಹಾಯಕಿ ಯಾರ ।
ಮುತ್ತಿನುಡಿಯಕ್ಕಿ ಬನದಮ್ಮ । ಹಾಯ್ದರ
ಬಿಚ್ಚಿ ಬಿದ್ದಾವ ಬಿಳಿ ಜೋಳ ॥

ರೈತನ ಶ್ರಮದ ಸ್ವೇದ ಬಿಂದುವಿಗೆ ಬನದೇವತೆಯ ಕೃಪೆಯ, ಪೋಷಣೆ ದೊರೆತರೆ, ಜೋಳದ ಫಲ ಮುತ್ತು ಸುರಿದಂತೆ ಬಿಚ್ಚಿ

ಬೀಳುವುದರಲ್ಲೇನಾಶ್ಚರ್ಯ ? ಮಲ್ಲಿಗೆ ಚೆಲ್ಲಿದಂತೆ ನಾಟಿರುವ ಜೋಳದ ಹೊಲದ ಸೊಗಸಿಗೆ ಮೋಹಗೊಂಡು ಬನದಮ್ಮ ಅಲ್ಲಿ ವಿಹರಿಸಲು ಬಂದಂತಿದೆ. ಅವಳು ಹೋದೆಡೆಯಲ್ಲೆಲ್ಲಾ ಮುತ್ತಿ ನುಡಿಯಕ್ಕಿಯ ಸೇಸೆ ಚೆಲ್ಲುವರಿಯುತ್ತದೆ. ಅವಳ ಪಾದ ಸ್ಪರ್ಶದಲ್ಲಿ ಚೆಲುವು ಮೂಡಿ ನಿಲ್ಲುತ್ತದೆ.

ಗಿಡದಾಗ ಗಿಡ ಚೆಲುವ ಮಾವಿನ ಗಿಡ ಚೆಲುವ।
ಹಕ್ಕಿ ಪಕ್ಕ್ಯಾಗ ಗಿಣಿ ಚೆಲುವ | ಮ್ಯಾಲೀನ
ಚಿಕ್ಕ್ಯಾಗ ಚೆಲುವ ಚಂದ್ರಾಮ ॥

ಇಲ್ಲಿಯು ಹೊರಚಲುವು, ಒಳಚಲುವುಗಳ ದರ್ಶನ ದೃಷ್ಟಿ ಅರ್ಥಪೂರ್ಣವಾಗಿದೆ. ಮಾವಿನ ಗಿಡ ಕಣ್ಣಿಗೆ ಮೊಹಕವಾಗಿರು ವದರ ಜೊತೆಗೆ ಇನ್ನುಳಿದ ಗಿಡಗಳ ಹಣ್ಣುಗಳಲ್ಲಿ ದೊರೆಯದ ಮಧುರತೆಯನ್ನು ಒಳಗೊಂಡು ಚೆಲುವಾಗಿದೆ; ಗಿಳಿ ಹಸಿರು ಬಣ್ಣ, ಕೆಂಪು ಮೂಗಿನಿಂದಷ್ಟೇ ಚಿತ್ತಾಕರ್ಷಕವಲ್ಲ, ಮಾತಿನ ಸೊಗಸಿನಿಂದ ಮೋಹಕವಾಗಿದೆ. ಚಿಕ್ಕೆಗಳಲ್ಲಿ ಚಂದ್ರಮ ಚಲುವ ಎನ್ನುವ ವರ್ಣನೆಯಲ್ಲಂತೂ ದರ್ಶನದ ಮೆಲ್ಮೆ ಭಾವಗೋಚರ ವಾಗುತ್ತದೆ. ಚಂದ್ರನು ಚಿಕ್ಕೆಗಳಿಗಿಂತ ದೊಡ್ಡವನಾಗಿ ದುಂಡಗೆ ಕಾಣುವುದು ಅವನ ಹೊರಗಿನಿಂದ. ಆದರೆ ಅವನು ತನ್ನ ಅಂತ ರಂಗದ ಆಹ್ಲಾದಮಯ ಬೆಳಕಿನಿಂದ ಎಲ್ಲರ ಹೃದಯಕ್ಕೆ ಶಾಂತಿ, ಸೊಗಸುಗಳನ್ನು ತುಂಬುವನು; ಅಸಂಖ್ಯಾತ ತಾರೆಗಳೂ ಮಾಡದ ಈ ಕೆಲಸವನ್ನು ಚಂದ್ರ ಮಾಡುವ ಗುಣವನ್ನು ಹೊಂದಿರುವುದರಿಂದಲೇ ಅವನಿಗೆ ಈ ಮೇಲ್ಮೆ. ಹೀಗೆ ಹೊರ

ಚೆಲುವಿನ ಸಿಪ್ಪೆಯನ್ನು ಸುಲಿದು ವಸ್ತುವಿನಲ್ಲಿ ಹುದುಗಿರುವ ಕೇವಲ ಸೌಂದರ್ಯವನ್ನು ಕಾಣುವ ಕಣ್ಣು ಬೆಳಕಿಗಾಗಿ ತೆರೆಯುವ ಬೆಳಕಿಂಡಿ.

ಯಾರು ಇದ್ದರು ನನ್ನ ತಾಯವ್ವನ್ಹೋಲರ ।
ಸಾವಿರ ಕೊಳ್ಳಿ ಒಲಿಯಾಗ । ಇಟ್ಟರ
ಜ್ಯೋತಿ ನಿನ್ಹ್ಯಾರೂ ಹೋಲರ ॥

ತಾಯಿಯ ಮಮತೆಯ, ತ್ಯಾಗದ ಗುಣದೌನ್ನತ್ಯವನ್ನು ಮಗಳು ಕಂಡು ಉಪಮಿಸಿ ಹಾಡಿರುವ ಸೊಗಸು ಎಷ್ಟು ಅರ್ಥಪೂರ್ಣವಾಗಿದೆ! ಹೆಣ್ಣಿಗೆ ಇತರರಂತೆ ಅನೇಕಾನೇಕ ಬಂಧು-ಬಳಗ ವರ್ಗ. ಅವರೆಲ್ಲರ ಪ್ರೇಮ ಸಾವಿರ ಕೊಳ್ಳಿಗಳು ಸೇರಿಕೊಂಡು ಉರಿಯನ್ನು ಬೀರಿದಂತೆ. ಆದರೆ ಅವಳು ಅನುಭವಿಸಿದ ತಾಯಿಯ ಪ್ರೇಮ ಉರಿಯುವ ಕೊಳ್ಳಿಯಂತಲ್ಲ; ತಾನೇ ತಾನಾಗಿ ಬೆಳಗುವ ಜ್ಯೋತಿಯನ್ನು ಪರಿಶೀಲಿಸಿ ಸತ್ಯದ ಸ್ವಾನುಭವದಿಂದ ಹಾಡುವ ಮಗಳ ಈ ಗೀತೆ 'ತಾಯಿಗಿಂತ ಬಂಧುವಿಲ್ಲ' ಎನ್ನುವ ಗಾದೆಗೆ ಕೊಟ್ಟ ಸತ್ವ.

ಬೆಳ್ಳಗೆ ಬೆಳಗಾಗಿ ಬೆಳ್ಳಿ ಮೂಡಲವಾಗಿ ।
ಒಳ್ಳೊಳ್ಳೆ ಮೀನ ಗರಿಗೆದರಿ । ಆಡ್ಯಾವ
ಗರತಿ ಗಂಗವ್ವ ಉಡಿಯಾಗ ॥

ಮರುಕ, ಸೃಜತೆಯ ದೃಷ್ಟಿಯಿಂದ ನೋಡುತ್ತ, ಚಿಂತಿಸುತ್ತ ಹೋದ ಹಾಗೆ ತಾಯಿಯ ಘನತೆ ಪರಿಪರಿಯಾಗಿ ಕಾಣುತ್ತ

ಹೋಗುವದು. ಮೂಡಲದ ಮಂಗಲ ಗಳಿಗೆಯಲ್ಲಿ ತಿಳಿಯಾಗಿ ನಿಂತಿರುವ ಗರತಿ ಗಂಗಮ್ಮನ ನೀರಿನ ಒಡಲು, ತಾಯಿಯ ಮಡಲಿನ ಮಧುರ ಸ್ಮರಣೆಯನ್ನು, ಅದು ಮಗುವಿಗೆ ಬಾಳ ತೊಟ್ಟಿಲವಾಗಿರುವ ಕಲ್ಪನೆಯ ಸೊಗಸನ್ನು ಮನಕ್ಕೆ ತಂದುಕೊಡುವುದು. ಹಿಂದೆ ತಾನುಂಡ ಆ ತಾಯ ಮಡಿಲಿನ ಸುಖದ ಕಲ್ಪನೆ ಗರತಿಯ ಚಿತ್ತದಲ್ಲಿ ಚಿರನೂತನವಾಗಿ ಉಳಿದುಕೊಂಡು, ಅದೇ ಬಗೆಯ ಸೊಗಸು ಕಂಡಲ್ಲೆಲ್ಲ ಮತ್ತೆ ಮತ್ತೆ ಅರಳಿ ಬಾಳನ್ನು ಸುಗಂಧಮಯ ಮಾಡುವುದು. ಈ ಸನ್ನಿವೇಶ ವರ್ಡ್ಸ್‌ವರ್ತ ಕವಿಯ 'They flash upon that inward eye' ಎಂಬ ಸಾಲನ್ನು ನೆನೆಯುವಂತೆ ಮಾಡುತ್ತದೆ.

ಮಕ್ಕಳ ಮೈಯಲ್ಲಿ, ಅವುಗಳ ಬಾಲ ಲೀಲೆಗಳಲ್ಲಿ ತಾಯಿ ದರ್ಶಿಸುವ ಸೌಂದರ್ಯವೂ ಇಷ್ಟೇ ಮನೋಹರ. ಮಗುವನ್ನು ತೊಟ್ಟಿಲಲ್ಲಿ ಕಂಡು 'ತೊಟ್ಟಿಲದೊಳಗೊಂದು ತೊಳೆದ ಮುತ್ತನು ಕಂಡೆ' ಎಂದು ಹಾಡುವಳು. ಹಸುಳೆಯ ಪರಿಶುಭ್ರ ತೇಜವನ್ನು ತೊಳೆದ ಮುತ್ತಿಗೆ ಹೋಲಿಸಿರುವುದರಲ್ಲಿ ಉಪಮೆಯ ಸಾರ್ಥಕ್ಯವಿದೆ; ಅಂಥ ಕೂಸು ಅಳುವುದರಲ್ಲಿಯೂ ತಾಯಿಯ ಕಣ್ಣುಗಳು ಮನೋಹರತೆಯನ್ನು ದರ್ಶಿಸಿ ಧನ್ಯವಾಗುವ ತೃಪ್ತಿಯಿದೆ.

ಅಳುವ ಕಂದನ ತುಟಿಯು ಹವಳದ ಕುಡಿ ಹಾಂಗ !
ಕುಡಿ ಹುಬ್ಬು ಬೇವಿನೆಸಳ್ಹಾಂಗ | ಕಣ್ನೋಟ
ಶಿವನ ಕೈಯಲಗು ಹೊಳೆದ್ಹಾಂಗ ॥

ಯಾವ ಅಲಂಕಾರ ಶಾಸ್ತ್ರವನ್ನು ಓದದ, ನೇರ ದರ್ಶನದ ತಾಯಿಯ ಸಹಜ ಸೌಂದರ್ಯ ಪರಿಭಾವನಾ ಗುಣ, ಅಲಂಕಾರಿ

ಕರಿಗೇ ರಸದೀಕ್ಷೆ ಕೊಡಲು ಹೊರಟಂತಿದೆ ಇಲ್ಲಿ. ಮಗುವಿನ ತುಟಿ ಕುಡಿ ಹುಬ್ಬುಗಳನ್ನು ವರ್ಣ, ರೇಖಾ ಗುಣ ಸಾದೃಶ್ಯದಿಂದ ಹವಳ, ಬೇವಿನ ಎಸಳುಗಳಿಗೆ ಹೋಲಿಸಿರುವುದರಲ್ಲಿ ಸಹಜತೆಯ ಚೆಲುವಿದ್ದರೂ, ಮಗುವಿನ ಚಂಚಲವೂ, ತೇಜಃಪುಂಜವೂ ಆದ ಕಣ್ಣಿನ ನೋಟವನ್ನು ಶಿವನ ಕೈ ಅಲಗಿಗೆ ಹೋಲಿಸಿ ವರ್ಣಿಸಿರುವುದರಲ್ಲಿ ಮಾರ್ಮಿಕ ಕಲ್ಪನಾ ವೈಖರಿಯ ದರ್ಶನವಿದೆ. ಶಿವನ ಕೈಯಲಗು ತುಸು ಅತ್ತಿತ್ತ ತಿರುಗಿದಾಗ ಫಳಫಳನೆ ಬೆಳಕು ಪ್ರತಿಫಲಿಸುವಂತೆ ಮಗು ಕಣ್ಣು ಹೊರಳಿಸಿದಾಗಲೆಲ್ಲ ಮಿಂಚು ಹರಿದಾಡುತ್ತಿರುತ್ತದೆ. ತಾಯಿಯ ಕಲ್ಪನಾ ವಿಲಾಸ, ಪ್ರತಿಭೆಯ ದರ್ಶನಕ್ಕೆ ಇನ್ನೊಂದು ಉದಾಹರಣೆ—

**ನೀಲಿ ಗಂಗಳದಾಗ ಹಾಲು ಬೆಳದಿಂಗಳು ।**
**ಬಾಲ ಚೆಲ್ಲ್ಯಾನೇನ ಕಾಲಿಟ್ಟು । ಕುಣದಾಡಿ**
**ಹಾಲು ಹರದಾಡಿ ಅಂಗಳದಿ ॥**

ಆಕಾಶ ನೀಲಿಯ ಗಂಗಾಳ; ಅಲ್ಲಿ ಪಸರಿಸಿರುವ ಬೆಳ್ಳನ್ನ ಬೆಳದಿಂಗಳು ಹಾಲು; ಅದು ಸುತ್ತೂ ಪಸರಿಸಿ ದಶದಿಕ್ಕುಗಳಿಗೆಲ್ಲ ಹರಿದಾಡಲಿಕ್ಕೆ ಕಾರಣ, ಮಗುವು ಗಂಗಾಳದಲ್ಲಿ ಕಾಲಿಟ್ಟು ಕುಣಿದಾಡಿದುದು. ಅದರ ಫಲವಾಗಿ ಹಾಲು ಹತ್ತೂ ದಿಕ್ಕಿಗೆ ಸೂರೆಯಾಗಿದೆ. ಇಲ್ಲಿಯ ಪ್ರಾಸದ ಸೊಗಸು, ಕಲ್ಪನೆಯ ಸೊಗಸು ತಾಯಿಯ ಭಾವ ಸೌಂದರ್ಯದ ವಿಸ್ತಾರಗುಣವನ್ನು ಸಂವೇದನಾಶೀಲತೆಯ ಚುರುಕುತನವನ್ನು ಪರಿಚಯ ಮಾಡಿಕೊಡುವವು.

ನಿಸರ್ಗದ ಚೆಲುವನ್ನು ಹೆಣ್ಣು ಕಂಡು ಆನಂದಿಸಿ ಹಾಡಿದರೆ. ಹೆಣ್ಣಿನ ಸೌಂದರ್ಯವನ್ನು ಗಂಡು, ಗಂಡಿನ ಚದುರನ್ನು ಹೆಣ್ಣು ಕಂಡು ಹಾಡುವುದರಲ್ಲಿ ಸೌಂದರ್ಯ, ರಸಿಕತೆಗಳ ಮಧುರ ಸಮ್ಮೇಳನ ಇರುವುದನ್ನು ಕಾಣಬಹುದು. ಹೊಳೆ ನೀರು ತೆರಿ ಚಿಮ್ಮಿಸಿದಂತೆ ನಿರಿಗೆಗಳನ್ನು ಚಿಮ್ಮುತ್ತ ಬರುವ ಚೆಲುವಿನ ಚೆನ್ನೆಯೋರ್ವಳನ್ನು ಕಂಡ ರಸಿಕನ ವರ್ಣನೆಯಿದು:

ರಂಭಿ ನಿನ್ನ ನೋಡಿ ನಾಚ್ಯಾಳ ಕಡಿಗಿ
ಗರಗರಾ ತಿರುವುತೇ ಕಣ್ಣಾ
ಕೆಂಪ ಮೈ ಬಣ್ಣ । ಬೇತಲಾ ಸಣ್ಣ ಕತ್ತಿ ಧಾರಿ
ನಿನ್ನ ಕಂಡು ಪಕ್ಷಿಗಳು ನಿಂತು ಹೌಹಾರಿ
ನಿನ್ನ ನೆಡಿಗಿ ನೋಡಿ ನವಲು
ಕುಣಿವುದ ಮರತಿತರಿ
ನಿನ್ನ ಶಬ್ದ ಕೇಳಿ ಆತು ಲುಬ್ಧ
ಕೋಗಿಲ ನಾಚಿ ಕದ್ದ । ವನಾ ಬಿಟ್ಟು ಹೊಯ್ತ ಹಾರಿ
ನಿನ್ನ ಕಂಡು ಬಂತ ಭವಳೀಕಿ
ಕಡೆದ್ಹಾಂಗಾತು ಚಿಕ್ಕಿ
ಪಾರಿವಾಳದ್ಹಕ್ಕಿ ಕೇಳ್ಯಾವ ಒದರಿ
ಆದಿ ವಿಷ್ಣುನರ್ಧಾಂಗಿ ಅಲ್ಲ ಇಕಿ ಸರಿ
ಎರಳಿ ನೋಟದಂಥ ಹೆಣ್ಣ
ಸಿಂಹನ್ಹಾಂಗ ನಡಾ ಸಣ್ಣ
ಕುಡಿ ಹುಬ್ಬು ಕಾಡಿಗಿ ಕಣ್ಣ

ಇಂಥ ರೂಪ, ಯೌವನದ ಚೆಲುವೆಗೆ, ಸಂಪಿಗಿ ತೆನಿಯಂಥ ಹುಡುಗನನ್ನು ಕಂಡು ಮರುಳು ಮಾಡಿ, ಚಿತ್ತ ಅವನಿಗಾಗಿ ಸೂರೆಗೊಂಡಿದೆ. ಹಂಬಲ ಅವನ ಮೈಮಾಟವನ್ನು ಕೂಡಿ ಕೊಂಡು ಹಾಡಾಗಿ ಹೊರಬರುತ್ತದೆ–

ನನ್ನ ಕಾಂತನ ರೂಪ ಹೊಂಟ್ಹಂಗ ಹುಣ್ವಿ ಚೆಂದಿರ ।
ಇವನ ಚಿಂತಿಯೊಳಗ ಜೀವಕಿಲ್ಲ । ಸ್ಥಿರಾರ
ಇವನ ಹಸ್ತ ಏನ ಶಿಸ್ತ ಮಾವಿನ ತಳಿರ ॥

ಇಲ್ಲಿಯ ಉಪಮೆಗಳೆಲ್ಲ ನಿತ್ಯ ಜೀವನದಲ್ಲಿ ಕಂಡುಂಡ ಸುಂದರ ವಸ್ತುಗಳ ಹತ್ತಿರದ ಪ್ರಪಂಚದವು. ಇವರು ಇಲ್ಲದ ಕಲ್ಪನೆಯನ್ನು ಕಡ ತರಲು ಹೊರಡದೆ ತಮ್ಮ ಗ್ರಾಮೀಣ ಪರಿಸರದಲ್ಲಿಯ ಚೆಲುವನ್ನೇ ಋಜು ದೃಷ್ಟಿಯಿಂದ ಅನುಭವಿಸಿ ವರ್ಣನೆಗೆ ಎಳೆದು ತರುವರು. ಈ ನುಡಿಗಳ ಭಾವ, ಬೆಡಗುಗಳೂ ನಮ್ಮಲ್ಲಿ ರಸೋದ್ರೇಕವನ್ನುಂಟು ಮಾಡದೆ ಇರವು. 'ಹಿತ್ತಲಿನ ಗಿಡ ಮದ್ದಾಗಲಾರದೆ?'

ಸುಂದರ ವಸ್ತುಗಳ ರೂಪ, ಗುಣವಿನ್ಯಾಸ ಮನ ಸೂರೆಗೊಳ್ಳುವಂತೆ, ಕೊರಗೂ – ನಿಜವಾದ ಹಾರ್ದಿಕ ಕೊರಗಾಗಿದ್ದರೆ – ನಮ್ಮ ಹೃದಯವನ್ನು ಪ್ರಭಾವಪೂರ್ಣವಾಗಿ ಸೂರೆಗೊಳ್ಳುತ್ತದೆ. ರಸದ ಬಗೆ ಬೇರೆಯಾದ ಮಾತ್ರಕ್ಕೆ ಅನುಭವಕ್ಕಾಗುವ ದರ್ಶನ ಬೇರೆಯಾಗುವ್ಪದಿಲ್ಲ.

ಬಾಲಕರಿಲ್ಲದ ಬಾಲಿದ್ಯಾತರ ಜನ್ಮ ।
ಬಾಡೀಗಿ ಎತ್ತು ದುಡಿದ್ಹಾಂಗ । ಬಾಳೆಲೆಯು

ಹಾಸ್ಕೊಂಡು ಬೀಸಿ ಒಗೆದ್ಹಾಂಗ
ಮುಗ್ಗ ಜ್ವಾಳದ್ಹಾಂಗ ಕಗ್ಗ ಬೆಳಸಿನ ಹಾಂಗ
ಹಗ್ಗಿಲ್ದ ಬಾವಿ ಕೊಡದ್ಹಾಂಗ | ಪತಿರಾಯ
ನೀ ಹೋದ ಚಣಕ ನನ ಜೀವ ||

ಬಂಜೆತನ, ವೈಧವ್ಯಗಳು ಹೆಣ್ಣಿನ ಕರುಳನ್ನಿರಿದು ಹೇಗೆ ಬಿಸಿಯುಸಿರು ಸೂಸಿ ಬರುವಂತೆ ಮಾಡುತ್ತವೆ ಎನ್ನುವದಕ್ಕೆ ಮೇಲಿನ ಎರಡು ಪದ್ಯಗಳು ಸಾಕ್ಷಿ. ಓದುಗರ ಹೃದಯದ ಮೇಲೆ ಉಂಟು ಮಾಡುವ ಪರಿಣಾಮ ಗುಣದಲ್ಲಿ ಇವು ಮೊದಲಿನ ಹಾಡುಗಳಿಗೆ ಕಡಿಮೆಯಾದುವಲ್ಲ. ತಾಯಿಯಲ್ಲಿಯೊ. ಮಗುವಿನಲ್ಲಿಯೊ, ನಿಸರ್ಗದಲ್ಲಿಯೊ ಚೆಲುವನ್ನು ಕಂಡು ನರ್ತಿಸಿದ ಭಾವನಾಲಹರಿ, ಇಲ್ಲಿ ಮಾತ್ರ ಹೃದಯದ ಬಂಜೆಯೆಂಬ ಗೋಳಿನ ವ್ಯಥೆಯನ್ನು, ವಿಧವೆಯೆಂಬ ನಿಕೃಷ್ಟತೆಯ ಚಿತ್ರವನ್ನು ಹೃದಯ ಕರಗುವಂತೆ ಬರೆಯುತ್ತವೆ. ಹೀಗೆ ನಲಿವು–ನೋವುಗಳ ಸಹಜ ಸೌಂದರ್ಯವನ್ನು ಕಂಡ ಜನಪದ ಕವಿಗಳ ಶಿವದೃಷ್ಟಿಯೂ ಚೇತೋಹಾರಿಯಾಗಿದೆ.

ಹೂವಿನಾಗ ಹುದುಗ್ಯಾನ ಮಾಲ್ಯಾಗ ಮಲಗ್ಯಾನ |
ಮೊಗ್ಗ್ಯಾಗ ಕಣ್ಣ ತೆರದಾನ | ಲಿಂಗಯ್ಯನ
ನೋಡಟಗೆ ನಿದ್ದಿ ಬಯಲಾಗಿ ||

ಕಣ್ಣಿಗೆ ಕಾಣುವ ಚೆಲುವಿನೆಚ್ಚರದಿಂದ ಬಗೆಗಣ್ಣು ತೆರೆದು ಚಿನ್ಮಯ ಚೆಲುವನ್ನೇ ಕಂಡ ವ್ಯಕ್ತಿಯು, ಜಡಲೋಕದ ನಿದ್ದೆಯನ್ನು ಬಯಲು ಮಾಡಿಕೊಂಡು, ಅರಿವಿನೆಚ್ಚರದ ಲೋಕದಲ್ಲಿ ಕಣ್ದೆರೆದು ಧನ್ಯನಾಗಿದ್ದಾನೆ. ಇದು ಅವರ ಅನುಭವ ಸಾಧನೆ, ಸೌದರ್ಯ ಸಿದ್ಧಿ, ಜೀವನ ಸಾರ್ಥಕತೆ !

# ಕೊನೆಯ ಮಾತು

ಜೀವನದ ವಿವಿಧ ಪರಿಸರದಲ್ಲಿ ಮೂಡಿ ಬಂದ ಜನಪದ ಹಾಡುಗಳಿಂದ ಈ ವರೆಗೆ ಜೀವನ ಧರ್ಮ ಸ್ವರೂಪವನ್ನು ವಿವರಿಸಿದ್ದಾಯಿತು. ಇಲ್ಲಿ ಅವರ ಜೀವನದ ಸಮಗ್ರ ನೋಟವೇ ಬಂದಿದೆಯೆಂದು ಹೇಳಲಾಗದು. ಅವರು ರಚಿಸಿರುವ ಶಿವ ಶರಣರ ಕಥನ ಕವನಗಳಲ್ಲಿ, ವ್ಯಕ್ತಿ ಚಿತ್ರದ ಪದ್ಯಗಳಲ್ಲಿ, ಲಾವಣಿ, ವೀರಗೀತೆಗಳಲ್ಲಿ, ಪ್ರಾದೇಶಿಕ ದೇವ–ದೇವತೆಗಳ ಹಾಡುಗಳಲ್ಲಿ ವ್ಯಕ್ತವಾಗಬಹುದಾದ ಜೀವನ ನೋಟ ವಿಸ್ತಾರವಾಗಿದೆ. ತವರು ಮನೆ, ಊರು, ನಾಡು, ಅಲ್ಲಿಯ ಸಿರಿ, ವೀರ, ಇಂಥವುಗಳ ಆತ್ಮೀಯ ಭಾವದಿಂದ ಹುಟ್ಟಿ ಹರಿದು ಬರುವ ದೇಶ ಪ್ರೇಮದ ಹೊನಲೂ ಜನಪದ ಜೀವನ ಧರ್ಮದ ರುಚಿಯನ್ನು ನಮಗೆ ಮಾಡಿಕೊಡುವುದು. ತವರು ಮನೆಯ ಪ್ರೇಮದಲ್ಲಿ ದೇಶ ಪ್ರೇಮ ಅಂಕುರದಂತೆ ಕಾಣಿಸಿಕೊಂಡು 'ಭೀಮರತಿಯೆಂಬ ಹೊಳಿ ತಂಪ' ಎಂದು ಹೇಳುವಲ್ಲಿ ನಾಡ ಹೊಳೆಯ ಪ್ರೇಮವಾಗಿ ಬೆಳೆದು ಕುಡಿಯೊಡೆದು,

ಚೆನ್ನಮ್ಮ ರಾಣಿಯ ಚಿಮ್ಮಿದ ನೆತ್ತರ ।
ಚಿನುಮಯ ಲಿಂಗಕ್ಕೆ ಮಜ್ಜನ । ಎರೆದಿತ್ತ
ಚಿನುಮಯ ಹೂವಾಗಿ ಸಲ್ಲಿತ್ತ ॥

ಎಂದು ಹಾಡುವಾಗ ಸ್ವಾತಂತ್ರ್ಯ ಪ್ರೇಮವಾಗಿ ಮಿಂಚಿನಂತೆ ಹರಿದಾಡಿ ಸಾರ್ಥಕ್ಯವನ್ನು ಪಡೆಯುತ್ತದೆ. ದೇಶ ಪ್ರೇಮ

ಕ್ಕಾಗಿ ಸುರಿದ ನೆತ್ತರ ಚಿನ್ಮಯ ಶಿವನಿಗೆರೆದ ಮಜ್ಜನವಾಗಿ, ಹೂವಾಗಿ ನಿಲ್ಲುತ್ತದೆ. ನಾಡಿಗಾಗಿ, ನಾಡವರಿಗಾಗಿ ಜೀವ ಕೊಡುವುದೂ ಅವರ ಜೀವನ ಧರ್ಮವಾಗಿತ್ತು ಎನ್ನುವುದನ್ನು ಸಾರಲು ಅನೇಕ ಪದ್ಯಗಳು ನಮಗೆ ಸಿಕ್ಕುತ್ತವೆ. ಇಂಥ ಗೀತೆಗಳು ಗಾತ್ರದಲ್ಲಿ ದೊಡ್ಡವಾಗಿರುವುದರಿಂದ ಈ ಸಣ್ಣ ಪುಸ್ತಕದಲ್ಲಿ ಅವುಗಳನ್ನು ತರುವುದು, ಅವುಗಳ ಗುಣ ವಿಮರ್ಶೆ ಮಾಡುವುದು ಅಸಾಧ್ಯ.

ವಿವರಿಸಲಾಗಿರುವ ನಾಲ್ಕಾರು ಅಂಶಗಳಿಂದ ನಮ್ಮ ನಾಡವರ ಜೀವನ ಧರ್ಮದ ಹೊಳಹುಗಳು, ಅವು ಮಿಡಿಯುತ್ತಿರುವ ಲೋಕದ ಬಾಳ ತಿರುಳು ವ್ಯಕ್ತವಾಗಿದೆಯೆಂದು ನಾನು ತುಸು ಮಟ್ಟಿಗಾದರೂ ಭಾವಿಸುತ್ತೇನೆ. ಜನಪದ ಸಾಹಿತ್ಯ ಸಂಗ್ರಹ ಕಾರ್ಯದಲ್ಲಿ ನಾನು ದುಡಿದವನೇನೂ ಅಲ್ಲ. ಆದರೆ ಅದರ ಸೊಗಸು, ಸೌಂದರ್ಯಗಳನ್ನು ಚಿಕ್ಕವನಿದ್ದಾಗ ಕೇಳಿ, ಹಾಡಿ, ಈಗ ಓದಿ ಸುಖಿಸಿದ್ದೇನೆ. ಇಲ್ಲಿ ವಿವರಣೆಗೆ ತೆಗೆದುಕೊಂಡಿರುವ ಪದ್ಯಗಳ ಬಹು ಪಾಲು ಪ್ರಕಟಗೊಂಡ ಪುಸ್ತಕಗಳಿಂದಲೇ ಎತ್ತಿಕೊಂಡವುಗಳು; ನನ್ನ ನೆನಪಿನ ಕಣಜದಿಂದ ಬಂದಿರುವುದು ತೀರ ಕಡಮೆ, ಇಲ್ಲವೆಂದರೂ ನಡೆದೀತು. ಈ ನಿಟ್ಟಿನಲ್ಲಿ ನಾನು ಕೊನೆಯಲ್ಲಿ ಕೊಟ್ಟಿರುವ ಗ್ರಂಥಗಳಿಗೆ, ಗ್ರಂಥಕರ್ತೃಗಳಿಗೆ ಋಣಿಯೆಂದು ಹೇಳದಿರಲಾರೆ.

ಇಲ್ಲಿಯ ವರೆಗೆ ಲಭ್ಯವಾಗಿರುವ ಜನಪದ ಜ್ಞಾನ ನಿಧಿ (Folk lore) ಯ ಗುಣವಿಮರ್ಶೆಯಿಂದ, ಅದು ನಾಡಿನ ಅಪೂರ್ವ ಸೊತ್ತಾಗಿದೆ, ಎಂಬ ತೀರ್ಮಾನವಂತೂ ನಿರ್ವಿವಾದ.

ಈ ಜ್ಞಾನನಿಧಿಯ ಸಂಕಲನ, ಸಂಪಾದನೆ, ಪ್ರಕಟನೆಗಳ ಕಾರ್ಯ ಕೆಲ ಮಟ್ಟಿಗಾದರೂ ಸಮಾಧಾನಕರವಾಗಿ ಸಾಗಿದೆಯೆಂಬುದು ಹೆಮ್ಮೆಯ ವಿಷಯ. ಕರ್ನಾಟಕದ ವಿಶ್ವವಿದ್ಯಾಲಯಗಳು ಈ ದಿಶೆಯಲ್ಲಿ ಪ್ರಶಂಸಾರ್ಹ ಕೆಲಸ ಮಾಡುತ್ತಿವೆ. ಆದರೆ ಹಿಂದಿನಿಂದ ಸತ್ವಪೂರ್ಣವಾಗಿ, ವೈವಿಧ್ಯಮಯವಾಗಿ ಹರಿಯುತ್ತ ಬಂದ ಜಾನಪದ ಸಾಹಿತ್ಯ ನಿರ್ಮಾಣ ಈಗ ಕುರಿಗಡಿದು ಹೋಗುತ್ತಿದೆ ಎಂಬುವ ಕೊರಗು ಮಾತ್ರ ಹೆಚ್ಚುತ್ತ ಬರುತ್ತಿದೆ. ಪ್ರಾಯಶಃ ನಮ್ಮವರು ಶುದ್ಧ, ಸಾತ್ವಿಕವಾದ ರಸಿಕತೆಯ ಸಂಸ್ಕಾರವನ್ನು ಕಳೆದುಕೊಳ್ಳುತ್ತಿರುವುದು; ಶುದ್ಧ ದೃಷ್ಟಿ, ಹಸನಾದ ಅಭಿರುಚಿಗಳು ಸುತ್ತುಮುತ್ತಲಿನ ವಿಷಮಯ ವಾತಾವರಣದಲ್ಲಿ ಮಸಕಾಗಿ, ಮಾಯವಾಗಿ ಹೋಗುತ್ತಿರುವುದು ಇದಕ್ಕೆ ಬಲವಾದ ಕಾರಣಗಳಾಗಿರಬಹುದಾಗಿದೆ. "ಈಗ ನಮ್ಮ ಸೀಮೆಗೆ ಕವಿದಿರುವ ಮಂಕಿನ ಬಹುಭಾಗವು ಹಳ್ಳಿಗಳಿಗೂ ಸೇರಿಕೊಂಡಿದೆ. ರೈತನ ಜೀವನ ಪೂರ್ಣವಾಗಿ ಅಮುಕಿ ಹೋಗಿದೆ. ರಾಗಿಯ ಮುದ್ದೆಯನ್ನೂ, ಮೆಣಸಿನಕಾಯಿಯ ನೀರನ್ನೂ ಸಂಪಾದಿಸುವುದಕ್ಕೇ, ಮನೆಯ ಮಕ್ಕಳೆಲ್ಲ ದುಡಿದರೂ, ಸಾಲದಿರುವಾಗ ಅವನಿಗೆ ಇನ್ನಾವುದರ ಮೇಲೂ ಆಶೆಯುಂಟಾಗದಿರುವುದು ಸ್ವಾಭಾವಿಕವಾಗಿದೆ. ಈ ಪರಿಸ್ಥಿತಿಯಲ್ಲಿ ಅವನ ಸಾಹಿತ್ಯವು ಅವನ ಕಣ್ಣಿಗೇ ಮರೆಯಾಗುತ್ತಿದೆ* ...." ಅವನ ಸಾಹಿತ್ಯ ಅವನ ಕಣ್ಣಿಂದ ಮರೆಯಾಗುತ್ತಿರುವುದು ಒಂದು ಯಾತನೆ. ಆದರೆ ಅವನ ಜೀವನಕ್ಕೆ ನೆಮ್ಮದಿಯಿಲ್ಲದೆ, ಅವ್ಯಾ

---

* ಗೊರೂರು ರಾಮಸ್ವಾಮಿ ಅಯ್ಯಂಗಾರ್-'ಹಳ್ಳಿಯ ಹಾಡುಗಳು'

ಹತವಾಗಿ ಹರಿದು ಬಂದ ಜನಪದ ಸಾಹಿತ್ಯ ಹೊಸ ಪ್ರವಾಹ ಪಡೆಯುದೆ ಬಡವಾಗುತ್ತಿರುವುದು ಹೆಚ್ಚಿನ ಯಾತನೆ. ಮೊದಲ ನೆಯ ಯಾತನೆಯನ್ನು ಸಂಗ್ರಹಕ್ಕೆ ಶೀಘ್ರಕಾರ್ಯೋನ್ಮುಖರಾಗುವ ಸಾಹಸಿಗಳು ತುಸುವಾದರೂ ಕಡಿಮೆಮಾಡಲಿಕ್ಕೆ ಸಾಧ್ಯವಿದೆ. ಆದರೆ ಎರಡನೆಯ ನಿರಾಶೆಗೆ ಆಶೆಯ ಕಿರಣ ಮೂಡುವಂತಾಗಬಹುದೆ?

ಸತ್ಯಂ, ಶಿವಂ, ಸುಂದರಂ



# ಗ್ರಂಥ ಋಣ

ಗರತಿಯ ಹಾಡು —ಸಂ. ಹಲಸಂಗಿ ಚೆನ್ನಮಲ್ಲಪ್ಪ
ಹಾಗೂ ಗೆಳೆಯರು

ಕನ್ನಡ ಜಾನಪದ ಗೀತಗಳು —ಡಾ. ಬಿ. ಎಸ್. ಗದ್ದಗಿಮಠ

ಹೊನ್ನ ಬಿತ್ತೇವು ಹೊಲಕೆಲ್ಲ —ಅಖಿಲ ಕರ್ನಾಟಕ
ಜನಪದ ಸಾಹಿತ್ಯ ಸಮ್ಮೇಳನದ ಸಂಸ್ಮರಣ ಗ್ರಂಥ

ಕರ್ನಾಟಕ ಸಂಸ್ಕೃತಿ ಸಮೀಕ್ಷೆ
—ಡಾ. ಎಚ್. ತಿಪ್ಪೇರುದ್ರಸ್ವಾಮಿ

ಸೌಂದರ್ಯ ಸಮೀಕ್ಷೆ —ಡಾ. ಜಿ ಎಸ್. ಶಿವರುದ್ರಪ್ಪ

ಜನಪದ ಸಾಹಿತ್ಯ ಸಮೀಕ್ಷೆ —ಜೀ. ಶಂ. ಪರಮಶಿವಯ್ಯ

ಸುವರ್ಣ ಸಂಚಯ —ಕನ್ನಡ ಅಧ್ಯಯನ ಸಂಸ್ಥೆ
ಮೈಸೂರು ವಿಶ್ವವಿದ್ಯಾಲಯ

ಜಾನಪದ ಕಥನ ಗೀತೆಗಳು —ಸಂ: ಕ. ರಾ. ಕೃಷ್ಣಸ್ವಾಮಿ

ಅಂಬಿಗರ ಗಂಗ ,, ,,

| | |
|---|---|
| ಮಲ್ಲಿಗೆ ದಂಡೆ | — ದಿ. ಕಾಪಸೆ ರೇವಪ್ಪನವರು |
| ಜನಾಂಗದ ಜೀವಾಳ | — ಸಿಂಪಿ ಲಿಂಗಣ್ಣ |
| ಗರತಿಯ ಬಾಳು | ,, ,, |
| ಹಳ್ಳಿಯ ಹಾಡುಗಳು | — ಸಂ. ಗೊರೂರು ರಾಮಸ್ವಾಮಿ ಅಯ್ಯಂಗಾರ್ |
| ಭಾರತೀಯ ಸಂಸ್ಕೃತಿ | — ಸಂ. ಅ. ನ. ಕೃಷ್ಣರಾಯ |
| Popular culture in Karnatak | — ಮಾಸ್ತಿಯವರು |
| ಜಾನಪದ ಗೀತೆಗಳು | — ಸಂ. ಎಂ. ಜೀವನ |

## ಈ ಮಾಲೆಯ
## ಇತ್ತೀಚಿನ ಪ್ರಕಟನೆಗಳು



---


ಪ್ರಸಂಗ ವಿಸ್ತರಣ ಹಾಗೂ ಪ್ರಕಟನ ವಿಭಾಗ
ಕರ್ನಾಟಕ ವಿಶ್ವವಿದ್ಯಾಲಯ
ಧಾ ರ ವಾ ಡ